ISBN 81-237-0655-3

ಮೊದಲ ಮುದ್ರಣ : 1993 (*ಶಕ 1915*)

ಮೂರನೆಯ ಮರು ಮುದ್ರಣ : 2002 (*ಶಕ 1923*)



Gautama Buddha *(Kannada)*

**ರೂ. 10.00**

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ - 110 016 ಇವರಿಂದ ಪ್ರಕಟಿತ.

ನೆಹರೂ ಬಾಲ ಪುಸ್ತಕಾಲಯ










ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ರಾಜಕುಮಾರ ಸಿದ್ಧಾರ್ಥ

ಎರಡು ಸಾವಿರದ ಐನೂರು ವರ್ಷಗಳಿಗಿಂತಲೂ ಹಿಂದೆ ಭಾರತ ದೇಶದ ಹಿಮಾಲಯ ಪರ್ವತ ಪ್ರದೇಶದಲ್ಲಿ ಕಪಿಲವಸ್ತು ಎಂಬ ರಾಜ್ಯವೊಂದಿತ್ತು. ಇಲ್ಲಿಯ ರಾಜ ಶುದ್ಧೋದನ. ಅವನ ರಾಣಿಯ ಹೆಸರು ಮಹಾಮಾಯೆ.





ಒಂದು ದಿನ ರಾತ್ರಿ ರಾಣಿ ಮಹಾಮಾಯೆ ಸುಖವಾಗಿ ನಿದ್ರಿಸುತ್ತಿದ್ದಾಗ ಒಂದು ಕನಸನ್ನು ಕಂಡಳು. ನಾಲ್ವರು ರಾಜರು ಅವಳನ್ನು ಬೆಳ್ಳಿಯಂತೆ ಮಿನುಗುವ ಒಂದು ಪರ್ವತದ ಮೇಲಿನ ಸುಂದರ ಸರೋವರಕ್ಕೆ ಕೊಂಡೊಯ್ಯುತ್ತಾರೆ; ಅಲ್ಲಿ ಅವಳಿಗೆ ಸ್ನಾನ ಮಾಡಿಸಿ, ಉತ್ತಮ ವಸ್ತ್ರಗಳಿಂದಲೂ ಘಮಘಮಿಸುವ ಪುಷ್ಪಗಳಿಂದಲೂ ಅಲಂಕರಿಸುತ್ತಾರೆ; ಅಲ್ಲಿಂದ ಸ್ವರ್ಗಕ್ಕೆ ಸಮನಾದ ಅರಮನೆಗೆ ಕೊಂಡೊಯ್ದು ಚಿನ್ನದ ಹಾಸಿಗೆಯ ಮೇಲೆ ಮಲಗಿಸುತ್ತಾರೆ; ಅಲ್ಲಿ ಒಂದು ಬಿಳಿ ಆನೆ ತನ್ನ ಸೊಂಡಲಿನಲ್ಲಿ ಒಂದು ಸೊಗಸಾದ ಕಮಲದ ಹೂವನ್ನು ಹಿಡಿದು ಅವಳನ್ನು ಮೂರು ಸಲ ಪ್ರದಕ್ಷಿಣೆ ಮಾಡಿ ಅವಳ ಗರ್ಭವನ್ನು ಪ್ರವೇಶಿಸುತ್ತದೆ.

ಆಸ್ಥಾನದ ವಿದ್ವಾಂಸರು, ವಿಪ್ರೋತ್ತಮರು ಈ ಕನಸಿಗೆ ಅರ್ಥ ಹೇಳುತ್ತಾ ರಾಣಿ ಮಹಾಮಾಯೆ ಒಬ್ಬ ಕೀರ್ತಿವಂತನಾದ ಉತ್ತಮ ಪುತ್ರನಿಗೆ ಜನ್ಮ ಕೊಡಲಿರುವುದಾಗಿ ಭವಿಷ್ಯ ನುಡಿದರು.

ಆ ಭವಿಷ್ಯವೂ ನಿಜವಾಯಿತು. ತಾನು ಮಗುವಿಗೆ ತಾಯಿ ಆಗಲಿರುವುದನ್ನು ತಿಳಿಯುತ್ತಲೇ ಪದ್ಧತಿಯಂತೆ ತನ್ನ ತವರೂರಿಗೆ ಪ್ರಯಾಣ ಹೊರಟಳು. ಆದರೆ ಊರು ಸೇರುವ ಮೊದಲೇ ಲುಂಬಿನಿ ಎಂಬ ಸ್ಥಳದಲ್ಲಿ ಸಾಲು ವೃಕ್ಷಗಳ ತೋಪಿನಲ್ಲಿ ಸಿದ್ಧಾರ್ಥನಿಗೆ ಜನ್ಮವಿತ್ತಳು.



ಮಹಾಮಾಯೆ ತನ್ನ ಹಸುಗೂಸಿನೊಡನೆ ಕಪಿಲವಸ್ತುವಿಗೆ ಹಿಂತಿರುಗಿದಳು. ಶುದ್ಧೋದನ ರಾಜ ಬಹು ಸಂತೋಷಗೊಂಡನು ಮತ್ತು ಉತ್ಸಾಹದಿಂದ ಅವರನ್ನು ಅರಮನೆಗೆ ಕರೆತಂದು ಉಪಚರಿಸಿದನು. ಇಡೀ ರಾಜ್ಯ ಅವನ ಆನಂದದಲ್ಲಿ ಪಾಲ್ಗೊಂಡಿತು.

ಇಷ್ಟರಲ್ಲೇ ಅಸಿತರೆಂಬ ಒಬ್ಬ ಮಹರ್ಷಿ ತಾಯಿ ಮತ್ತು ಮಗುವನ್ನು ಆಶೀರ್ವದಿಸಲು ಅರಮನೆಗೆ ಬಂದರು. ಮುದ್ದು ರಾಜಕುಮಾರನನ್ನು ತನ್ನ ಕೈಗಳಿಂದ ನೇವರಿಸುತ್ತಾ ಆನಂದಗೊಂಡು "ಈತನು ಮಹಾಪುರುಷನಾಗುವುದರಲ್ಲಿ ಸಂಶಯವಿಲ್ಲ" ಎಂದು ಘೋಷಿಸಿದರು.

ಆದರೆ ಆ ಮಹರ್ಷಿ ಇದ್ದಕ್ಕಿದ್ದ ಹಾಗೆ ಅಳಲಾರಂಭಿಸಿದರು. ಗಾಬರಿಗೊಂಡ ರಾಜ "ನನ್ನ ಪುತ್ರನಿಗೆ ಅದೆಂತಹ ಅಪಾಯ ಕಾದಿದೆ?" ಎಂದು ಅಸಿತರನ್ನು ಕಾತರದಿಂದ ಕೇಳಿದನು.

ಅಸಿತರು "ನಿನ್ನ ಮಗನಿಂದಾಗಿ ನಾನು ದುಃಖ ಪಡುತ್ತಿಲ್ಲ. ನನ್ನ ಬಗ್ಗೆಯೇ ನನಗೆ ದುಃಖವಾಗಿದೆ. ಈ ಸುಪುತ್ರನು ಲೋಕವನ್ನೇ ಉದ್ಧರಿಸುವ ಸುದಿನ ಬರಲಿದೆ. ಈಗಾಗಲೇ ನಾನು ಮುದುಕನಾಗಿರುವುದರಿಂದ ಮುಂಬರುವ ಆ ಸಂತೋಷದ ಸಮಯದವರೆವಿಗೂ ಬದುಕಿರನಾರೆನಲ್ಲಾ ಎಂದು ದುಃಖ ಪಡುತ್ತಿದ್ದೇನೆ" ಎಂದು ಹೇಳುತ್ತಾ ಬಂದ ದಾರಿ ಹಿಡಿದು ಹಿಂತಿರುಗಿದರು.

ಮಗು ಹುಟ್ಟಿದ ಏಳನೆಯ ದಿನ ರಾಣಿ ಮಹಾಮಾಯೆ ಕೊನೆಯುಸಿರೆಳೆದಳು. ರಾಜನ ಎರಡನೇ ಹೆಂಡತಿ, ಮಹಾಮಾಯೆಯ ತಂಗಿ, ಪ್ರಜಾಪತಿಯೇ ಎಳೆಯ ಮಗುವನ್ನು ತನ್ನ ಮಗುವೆಂದೇ ಪ್ರೀತಿಯಿಂದ ಸಾಕಿದಳು.

ಶುದ್ಧೋದನ ಮಹಾರಾಜನು ಪ್ರಖ್ಯಾತರಾದ ಅನೇಕ ವಿಧ್ವಾಂಸರನ್ನು ದೇಶ-ವಿದೇಶಗಳಿಂದ ಕರೆಸಿ "ನನ್ನ ಮಗ ಮುಂದೆ ಹೇಗೆ ಬಾಳುತ್ತಾನೆ?" ಎಂಬ ಪ್ರಶ್ನೆಯನ್ನೇ ಪ್ರತಿಯೊಬ್ಬರನ್ನೂ ಕೇಳಿದನು. ಅಸಿತರು ಹೇಳಿದ್ದ ಭವಿಷ್ಯವನ್ನೇ ವಿಧ್ವಾಂಸರೆಲ್ಲರೂ ಅನುಮೋದಿಸುತ್ತಾ "ಲೋಕದಲ್ಲೇ ಪ್ರಖ್ಯಾತ ಪುರುಷ ಆಗುವನು" ಎಂದು ಹೇಳಿದರು.

"ಅದು ಹೇಗೆ?" ರಾಜನು ಪ್ರಶ್ನಿಸಿದನು.

"ಅವನು ಲೋಕವನ್ನೇ ಜಯಿಸುತ್ತಾನೆ" ಎಂದರು ಒಬ್ಬರು.

"ಅವನು ಅರಮನೆಯ ಆವರಣದಲ್ಲೇ ಇರುವ ಪಕ್ಷದಲ್ಲಿ ಇದು ಸಾಧ್ಯ" ಎಂದು ಮತ್ತೊಬ್ಬರು ನುಡಿದರು.

"ಪ್ರಪಂಚಕ್ಕೆಲ್ಲಾ ಜ್ಞಾನವನ್ನು ಬೋಧಿಸುವ ಗುರುವಾಗುತ್ತಾನೆ" ಎಂದು ಮೂರನೇ ವಿಧ್ವಾಂಸರು ಹೇಳಿದರು.

"ಸಂಸಾರವನ್ನು ತೊರೆದು ಸಂನ್ಯಾಸಿಯಾದರೆ ಮಾತ್ರ ಲೋಕಕ್ಕೆ ಗುರುವಾಗಲು ಸಾಧ್ಯ" ಎಂದು ನಾಲ್ಕನೇ ವಿಧ್ವಾಂಸರು ಅಭಿಪ್ರಾಯ ಪಟ್ಟರು.

ಶುದ್ಧೋದನನಿಗೆ ತನ್ನ ಮಗ ಗುರುವಾಗಿ ಪಡೆಯಬಹುದಾದ ಕೀರ್ತಿ ರುಚಿಸಲಿಲ್ಲ. ಏನಿದ್ದರೂ ತನ್ನ ಏಕಮಾತ್ರ ಪುತ್ರನು ಕ್ಷತ್ರಿಯ ಧರ್ಮವನ್ನು ಬಿಡದೆ ಲೋಕವನ್ನೇ ಜಯಿಸುವ ಭಾಗ್ಯಶಾಲೀ ರಾಜನಾಗಬೇಕೆಂಬುದೇ ಅವನ ಇಚ್ಛೆಯಾಗಿತ್ತು.

ಆಸ್ಥಾನದ ಪಂಡಿತರು "ಕುಮಾರನು ಸಂಸಾರವನ್ನು ತ್ಯಜಿಸಿ ಸಂನ್ಯಾಸಿಯಾಗದೇ ಬಾಳಬೇಕಾದರೆ ಯಾವುದೇ ಕಷ್ಟ ಅಥವಾ ದುಃಖ ಅವನ ಕಣ್ಣಿಗೆ ಬೀಳದಂತೆ ಎಚ್ಚರಿಕೆ ವಹಿಸಬೇಕು" ಎಂದು ರಾಜನಿಗೆ ಸಲಹೆ ಮಾಡಿದರು.

ಆದುದರಿಂದ ಶುದ್ಧೋದನನು ತನ್ನ ಮಗನು ಸರ್ವದಾ ಸುಖ ಸಂತೋಷದಿಂದಲೇ ನಲಿಯಬೇಕೆಂದು, ಸುಂದರ ಸನ್ನಿವೇಶದಲ್ಲೇ ಬೆಳೆಯಬೇಕೆಂದು ನಿರ್ಧರಿಸಿದನು. ಇದಕ್ಕಾಗಿ ಸುಂದರವಾದ ಮೂರು ಅರಮನೆಗಳನ್ನು ಕಟ್ಟಿಸಿದನು.



ಎತ್ತರವಾದ ಮರಗಳ ನೆರಳಿನಲ್ಲಿ ಶೀತಗಾಳಿ ಬೀಸುತ್ತಿರುವ ಉದ್ಯಾನದ ಮಧ್ಯೆ ಬೇಸಿಗೆ ಕಾಲಕ್ಕಾಗಿ ಒಂದು ಅರಮನೆಯನ್ನು, ಬೆಚ್ಚಗಿನ ಬಿಸಿಲೂ ಸೂರ್ಯನ ಶಾಖವೂ ತಟ್ಟುವಂತೆ ವಿಶಾಲ ಮಾರ್ಗಗಳಿಂದ ಕೂಡಿದಂತೆ ಚಳಿಗಾಲಕ್ಕಾಗಿ ಮತ್ತೊಂದು ಅರಮನೆಯನ್ನು, ಮಹಲಿನ ಒಳಗಡೆಯೇ ಆಟ ವಿನೋದಗಳಿಗಾಗಿ ವಿಶಾಲವಾದ ಕೊಠಡಿಗಳಿರುವಂತೆ ಮಳೆಗಾಲಕ್ಕಾಗಿ ಮೂರನೇ ಅರಮನೆಯನ್ನು ನಿರ್ಮಿಸಿದನು. ಈ ಮೂರೂ ಅರಮನೆಗಳು ಹೂತೋಟಗಳಿಂದಲೂ ಕಮಲದ ಕೊಳಗಳಿಂದಲೂ ಕೂಡಿದ ಉದ್ಯಾನಗಳಿಂದ ಆವೃತವಾಗಿದ್ದವು. ಆರೋಗ್ಯವಂತರು ಮತ್ತು ಯುವಕರು ಮಾತ್ರ ಈ ಅರಮನೆಯನ್ನು ಪ್ರವೇಶಿಸಲು ಅವಕಾಶ ಕೊಡುವಂತೆ ಕಾವಲುಗಾರರನ್ನು ಎಚ್ಚರಿಸಲಾಗಿತ್ತು.

ಸುಖ-ಸಮೃದ್ಧಿಯಿಂದ ಕೂಡಿದ ಈ ಭವ್ಯ ಅರಮನೆಗಳಲ್ಲಿ ಸಿದ್ಧಾರ್ಥನು ಬೆಳೆದನು. ಉತ್ತಮ ರೇಷ್ಮೆಯನ್ನಲ್ಲದೆ ಬೇರೆ ವಸ್ತ್ರವನ್ನು ಅವನು ತೊಡುತ್ತಿರಲಿಲ್ಲ. ಬಿಸಿಲಾಗಲಿ, ಮಳೆಯಾಗಲಿ, ಚಳಿಯಾಗಲಿ ಅವನು ಎಂದೂ ಅರಮನೆಯ ಹೊಸಲು ದಾಟಿ ನಡೆದವನಲ್ಲ, ಯಾವ ಕಷ್ಟವನ್ನೂ ನೋಡಲಿಲ್ಲ. ಅವನ ಇಷ್ಟ ಪ್ರಕಾರ ಉಪಚರಿಸಲು ಅವನಿಗೆ ನೂರಾರು ಮಂದಿ ಸೇವಕರಿದ್ದರು. ಅವನೊಡನೆ



ಆಟವಾಡಲು ಸ್ನೇಹಿತರೆಂದರೆ – ಸೋದರನೆಂಟನಾದ ದೇವದತ್ತ ಮತ್ತು ಮಂತ್ರಿಯ ಮಗನಾದ ಕಾಲುದಾಯಿನ್. ಈ ರಾಜಕುಮಾರನೇ ಮುಂದೆ ರಾಜನ ಸಿಂಹಾಸನವನ್ನು ಹತ್ತುವವನಾದುದರಿಂದ ಶಾಕ್ಯರೆಲ್ಲರಿಗೂ ಅತಿ ಮೆಚ್ಚಿನ ಬಾಲಕನಾಗಿ ಬೆಳೆದನು. ಇವರ ವಂಶಕ್ಕೆ ಗೌತಮರೆಂಬ ಹೆಸರಿದ್ದುದರಿಂದ ಇವನನ್ನು ಜನ ರಾಜಕುಮಾರ ಗೌತಮನೆಂದೇ ಕರೆಯತೊಡಗಿದರು.

ಎಳೆಯ ವಯಸ್ಸಿನಿಂದಲೇ ಸಿದ್ಧಾರ್ಥನು ಕ್ಷಮಾಶೀಲನೂ, ಸಹೃದಯ ಸ್ವಭಾವದವನೂ ಆಗಿದ್ದನು: ಅವನು ಮನುಷ್ಯರಷ್ಟೇ ಅಲ್ಲದೆ ಪಶುಪಕ್ಷಿ ಹಾಗೂ ಸಕಲ ಜೀವಿಗಳ ಬಗ್ಗೆ ದಯಾಮಯಿಯಾಗಿದ್ದನು. ಸಣ್ಣ ಸಣ್ಣ ಕೀಟಗಳೂ ಸಹ ಅವನ ದಯೆಗೆ ಪಾತ್ರವಾಗುತ್ತಿದ್ದವು.

ಒಂದು ದಿನ ಸಿದ್ಧಾರ್ಥನು ಅರಮನೆಯಲ್ಲಿ ಗೆಳೆಯರೊಡನೆ ಅಡ್ಡಾಡುತ್ತಿದ್ದಾಗ ಆಕಾಶದಲ್ಲಿ ಹಂಸ ಪಕ್ಷಿಗಳು ಸಾಲಾಗಿ ಹಾರುತ್ತಿರುವುದನ್ನು ನೋಡಿದನು. ಇದ್ದಕ್ಕಿದ್ದ ಹೆಗೆ ಎಲ್ಲಿಂದಲೋ ಒಂದು ಬಾಣ ರೊಯ್ಯನೆ ಹಾರಿ ಬಂದುದನ್ನೂ ಒಂದು ಪಕ್ಷಿ ಆ ಬಾಣದಿಂದ ಹತವಾಗಿ ಬೀಳುತ್ತಿರುವುದನ್ನೂ ಕಂಡನು.

ಸಿದ್ಧಾರ್ಥ ಓಡಿಹೋಗಿ ಪಕ್ಷಿಯನ್ನು ಎತ್ತಿಕೊಂಡು ಅದಕ್ಕೆ ನಾಟಿದ್ದ ಬಾಣವನ್ನು ಮೃದುವಾಗಿ ಕಿತ್ತೆಸೆದು ಗಾಯಕ್ಕೆ ಮದ್ದು ಹಚ್ಚಿ ಆರೈಸಿದನು. ಅಷ್ಟರಲ್ಲೇ ದೇವದತ್ತನು ಓಡಿಬಂದು ಆ ಪಕ್ಷಿಯನ್ನು ತನ್ನ ವಶಕ್ಕೆ ಒಪ್ಪಿಸಬೇಕೆಂದು ಹೇಳಿದನು. ಆದರೆ ಸಿದ್ಧಾರ್ಥನು ಅದನ್ನು ಬಿಟ್ಟುಕೊಡಲು ಒಪ್ಪಲೇ ಇಲ್ಲ.

ಕೋಪಗೊಂಡ ದೇವದತ್ತನು ಶುದ್ಧೋದನ ರಾಜನ ಬಳಿಗೆ ಹೋಗಿ "ಆ ಪಕ್ಷಿಯನ್ನು ನಾನೇ ಬಾಣದಿಂದ ಹೊಡೆದು ಬೀಳಿಸಿದ್ದೇನೆ. ಆದರೂ ಸಿದ್ಧಾರ್ಥನು ನನಗೆ ಅದನ್ನು ಕೊಡಲೊಲ್ಲನು. ನನ್ನ ಪಕ್ಷಿಯನ್ನು ನನಗೆ ಕೊಡಿಸಿ" ಎಂದು ಭಿನ್ನವಿಸಿಕೊಂಡನು.

ಶುದ್ಧೋದನನು ಸ್ವತಃ ತೋಟಕ್ಕೆ ಹೋಗಿ "ಬೇಟೆ ಬೇಟೆಗಾರನಿಗೆ ಸೇರಿದ್ದು. ಈ ಸಿದ್ಧಾಂತದ ಪ್ರಕಾರ ನೀನು ಪಕ್ಷಿಯನ್ನು ದೇವದತ್ತನಿಗೆ ಕೊಡಬೇಕು" ಎಂದು ಸಿದ್ಧಾರ್ಥನಿಗೆ ಹೇಳಿದನು.

"ಇದು ಹೇಗೆ ಸಾಧ್ಯ? ಕೊಲ್ಲುವವನಿಗಿಂತ ರಕ್ಷಿಸುವವನು ದೊಡ್ಡವನು. ನಿರಪರಾಧಿಯಾದ ಈ ಪಕ್ಷಿಯನ್ನು ದೇವದತ್ತ ಕೊಲ್ಲಲು ಪ್ರಯತ್ನಿಸಿದನು. ನಾನು ಇದಕ್ಕೆ ಜೀವದಾನ ಮಾಡಿದ್ದೇನೆ. ಈಗ ನೀವೇ ಹೇಳಿ, ಇದರ ಮೇಲೆ ಯಾರ ಅಧಿಕಾರ ಹೆಚ್ಚು" ಎಂದು ಸಿದ್ಧಾರ್ಥನು ತಂದೆ ಯನ್ನು ಪ್ರಶ್ನಿಸಿದನು.

ರಾಜ ಶುದ್ಧೋದನನು ತನ್ನ ಮಗನ ವಾದದಿಂದ ಪ್ರಭಾವಿತನಾದನು. ನಿಜವಾಗಿಯೂ ಜೀವ ತೆಗೆಯುವವನಿಗಿಂತ ಜೀವ ನೀಡುವವನು ದೊಡ್ಡವನು. ಹಂಸ ಪಕ್ಷಿ ಸಿದ್ಧಾರ್ಥನ ಬಳಿಯೇ ಉಳಿಯಿತು.

ಸಿದ್ಧಾರ್ಥನು ಬೆಳೆಯುತ್ತಿದ್ದಂತೆ ಅವನ ವಿದ್ಯಾಭ್ಯಾಸಕ್ಕಾಗಿ ತನ್ನ ರಾಜ್ಯದ ಉತ್ತಮ ಪಂಡಿತರನ್ನು ರಾಜನು ಗೊತ್ತುಪಡಿಸಿದನು. ಕುಮಾರನು ಯಾವುದೇ ವಿದ್ಯೆಯನ್ನು ಕಲಿಯುವುದರಲ್ಲಿ ಜಾಣನೂ, ಕುಶಾಗ್ರಬುದ್ಧಿಯುಳ್ಳವನೂ ಆಗಿದ್ದುದರಿಂದ ಎಲ್ಲಾ ಪಾಠಗಳನ್ನೂ ಸುಲಭವಾಗಿ ಕಲಿತನು. ಜೊತೆಗೆ ಮಲ್ಲಯುದ್ಧ, ಕತ್ತಿವರಸೆ, ಧನುರ್ವಿದ್ಯೆ ಮುಂತಾದ ರಾಜೋಚಿತ ಕುಶಲಕಲೆಗಳನ್ನೂ ಸುಲಭವಾಗಿ ಕಲಿತು ಪ್ರವೀಣನಾದನು.

ರಾಜಕುಮಾರ ಸಿದ್ಧಾರ್ಥ ನೋಡಲು ಬಹಳ ಸುಂದರನಾಗಿದ್ದನು. ಅವನನ್ನು ನೋಡಿದವರೆಲ್ಲಾ ಅವನ ರೂಪದಿಂದ ಮುಗ್ಧರಾಗುತ್ತಿದ್ದರು. ಒಂದು ದಿನ ಮನೆತನದ ಸಮಾರಂಭದಲ್ಲಿ ಸಿದ್ಧಾರ್ಥನು ರಾಜಕುಮಾರಿ ಯಶೋಧರೆಯನ್ನು

ಕಂಡನು. ರಾಜವಂಶಕ್ಕೆ ಸೇರಿದ್ದ ಯಶೋಧರೆ ಬಹಳ ರೂಪವತಿಯಾಗಿದ್ದಳು. ಇಬ್ಬರಲ್ಲೂ ಪ್ರೀತಿ ಅಂಕುರಿಸಿತು.

ಆ ಕಾಲದ ಪದ್ಧತಿಯಂತೆ ಯಶೋಧರೆಯ ತಂದೆ ಅವಳಿಗೆ ಅನುರೂಪನಾದ ವರನನ್ನು ನಿರ್ಧರಿಸಲು ಒಂದು ಬಿಲ್ಲುಗಾರಿಕೆ ಸ್ಪರ್ಧೆಯನ್ನು ಏರ್ಪಡಿಸಿದನು. ಈ ಸ್ಪರ್ಧೆಯಲ್ಲಿ ಅಗ್ರಸ್ಥಾನ ಪಡೆದವನು ಯಶೋಧರೆಯನ್ನು ಮದುವೆಯಾಗ ಬಹುದಿತ್ತು. ರಾಜಕುಮಾರ ಸಿದ್ಧಾರ್ಥನೂ ಈ ಸ್ಪರ್ಧೆಯಲ್ಲಿ ಭಾಗವಹಿಸಲು ನಿಶ್ಚಯಿಸಿದನು.

ಯಶೋಧರೆಯನ್ನು ಮದುವೆಯಾಗಲು ಹಲವಾರು ಮಂದಿ ಸ್ಪರ್ಧೆಗೆ ಸಿದ್ಧ ರಾದರು. ಈ ಸುಂದರಿಯ ಕೈ ಹಿಡಿಯಲು ಅಕ್ಕಪಕ್ಕದ ರಾಜಕುಮಾರರಲ್ಲದೆ ದೂರ ದೇಶಗಳಿಂದಲೂ ಅನೇಕರು ಸಿದ್ಧರಾಗಿ ಬಂದರು. ಅವರೆಲ್ಲರೂ ದಷ್ಟಪುಷ್ಟವಾಗಿ ಬಲಶಾಲಿಗಳಂತೆ ಇದ್ದರು. ಅವರ ಮುಂದೆ ಸಿದ್ಧಾರ್ಥನು ಹಗಲುಗನಸು ಕಾಣುವ ಭಾವುಕನಂತೆ ಮತ್ತು ಸೂಕ್ಷ್ಮ ಸ್ವಭಾವದ ಸುಕುಮಾರನಂತೆ ಸಪ್ಪೆಯಾಗಿ ಕಂಡು ಬಂದನು. ಇವನು ಸ್ಪರ್ಧೆಯಲ್ಲಿ ಜಯಿಸಲಾರನೆಂದೇ ಎಲ್ಲರೂ ಎಣಿಸಿದರು.

ಸ್ಪರ್ಧೆ ಮುಂದುವರೆದಂತೆ ಸಿದ್ಧಾರ್ಥನು ಮುಂದೆ ನಡೆದು, ಯಾರಿಗೂ ಹಿಂದೆ ಬೀಳಲಿಲ್ಲ. ಸ್ಪರ್ಧಿಗಳಿಗಾಗಿ ಹೊಸ ಹೊಸ ಬಾಣಗಳು ಬಂದವು. ಒಬ್ಬೊಬ್ಬರೂ ಬಿಲ್ಲನ್ನು ಬಗ್ಗಿಸಿ ಬಾಣ ಹೂಡಿ ಗುರಿಯನ್ನು ಸಾಧಿಸುತ್ತಿದ್ದರು. ಇನ್ನೂ ದೂರದ ಮತ್ತು ಎತ್ತರದ ಗುರಿಗಳನ್ನು ಕರಾರುವಾಕ್ಕಾಗಿ ಭೇದಿಸುತ್ತಿದ್ದರು. ಸಿದ್ಧಾರ್ಥನು ಈ ಎಲ್ಲಾ ಗುರಿಗಳನ್ನೂ ಸುಲಭವಾಗಿ ಸಾಧಿಸಿದನು.

ಕಡೆಗೆ ಸಿದ್ಧಾರ್ಥನು ಇನ್ನೂ ದೊಡ್ಡದಾದ ಮತ್ತು ಬಲವಾದ ಬಿಲ್ಲನ್ನು ತರಹೇಳಿದನು. 'ಸಿಂಹಧನು' ಎಂಬ ಬೃಹತ್ ಪ್ರಮಾಣದ ಬಿಲ್ಲನ್ನು ಒಂದು ದೇವಸ್ಥಾನದಲ್ಲಿ ಇಟ್ಟಿದ್ದರು. ಯಾರಿಗೂ ಅದನ್ನು ಬಗ್ಗಿಸಿ ಹೆದೆ ಏರಿಸುವ ಸಾಮರ್ಥ್ಯವಿರಲಿಲ್ಲ. ಕೆಲವಾರು ಜನ ಹೋಗಿ ಆ ಸಿಂಹ ಧನುಸ್ಸನ್ನು ಹೊತ್ತು ತಂದು ಇವನ ಮುಂದೆ ಇಟ್ಟರು. ಜನರೆಲ್ಲರೂ ಆಶ್ಚರ್ಯದಿಂದ ಕಾದು ನೋಡುತ್ತಿದ್ದರು. ಸಿದ್ಧಾರ್ಥನು ಅನಾಯಾಸವಾಗಿ ಆ ಧನುಸ್ಸನ್ನು ಬಗ್ಗಿಸಿ ಹೆದೆ ಏರಿಸಿ, ಒಂದು ದೊಡ್ಡ ಬಾಣವನ್ನು ಹೂಡಿ ಆಕಾಶದ ಕಡೆಗೆ ಬಿಟ್ಟನು. ಆ ಬಾಣವು ಕಿವಿಯೊಡೆಯುವಂತೆ ರೊಯ್ಯನೆ ಶಬ್ಧಮಾಡುತ್ತಾ ಮಿಂಚಿನ ವೇಗದಲ್ಲಿ ಆಕಾಶಕ್ಕೆ ಹಾರಿ ಮಾಯವಾಯಿತು.

ಆ ನಂತರ ಎಲ್ಲಾ ರಾಜಕುಮಾರರೂ ತಮ್ಮ ಸೋಲನ್ನು ಒಪ್ಪಿಕೊಂಡು ಒಬ್ಬೊಬ್ಬರಾಗಿ ಹಿಂತಿರುಗಿದರು. ಸ್ಪರ್ಧೆಯಲ್ಲಿ ಸಿದ್ಧಾರ್ಥನೇ ಜಯಿಸಿದನೆಂದು ಘೋಷಿಸಲಾಯಿತು. ಶುದ್ಧೋದನ ರಾಜನೇ ಎಲ್ಲರಿಗಿಂತ ಹೆಚ್ಚು ಸಂತೋಷ ಗೊಂಡನು. ತನ್ನ ಮಗ ಮುಂದೆ ಲೋಕವನ್ನೇ ಗೆಲ್ಲುವ ಸಾಮರ್ಥ್ಯಶಾಲಿ ಆಗುವುವನೆಂದು ಬಗೆದನು. ಅಲ್ಲದೆ ಸುರಸುಂದರಿಯಾದ ಹೆಂಡತಿ ಯಶೋಧರೆಯನ್ನು ಬಿಟ್ಟು ತನ್ನ ಮಗ ಎಂದಿಗೂ ಸಂನ್ಯಾಸಿಯಾಗಲಾರನೆಂದು ಸ್ಥಿರವಾಗಿ ನಂಬಿದನು.



# ಸತ್ಯದ ಶೋಧನೆ

ಸಿದ್ಧಾರ್ಥನು ಚೆಲುವಿನ ಖನಿಯಾದ ತನ್ನ ಹೆಂಡತಿಯೊಡನೆ ತನ್ನ ಅರಮನೆಯಲ್ಲಿ ಸಂತೋಷದಿಂದ ಬಾಳುತ್ತಿದ್ದನು. ಇವನ ಸುತ್ತಲೂ ಸುಖ-ಸಂತೋಷಗಳೂ, ಚೆಲುವೂ ಸರ್ವದಾ ನಲಿಯುವಂತೆ ಶುದ್ಧೋದನನು ಎಚ್ಚರಿಕೆಯಿಂದ ಏರ್ಪಾಡು ಮಾಡಿದ್ದನು. ಪ್ರಪಂಚದಲ್ಲಿ ಕಷ್ಟವೂ ದುಃಖವೂ ಉಂಟೆಂಬುದೇ ಅವನಿಗೆ ಗೊತ್ತಾಗ[illegible].

ಹಾಗಿದ್ದರೂ, ಅರಮನೆಯಿಂದಾಚೆ ಒಂದು ಪ್ರತ್ಯೇಕ ಪ್ರಪಂಚವಿದೆ ಎಂದು ಸಿದ್ಧಾರ್ಥನು ಸಹಜವಾಗಿಯೇ ತರ್ಕಿಸಿದ್ದನು. ಅದು ಹೇಗಿದ್ದೀತು ಎಂಬುದನ್ನು ತಿಳಿಯುವ ಕಾತುರತೆಯೂ ಇತ್ತು. ಆಗಾಗ ನಿರ್ಜನ ಪ್ರದೇಶಕ್ಕೆ ಹೋಗಿ ಒಂಟಿಯಾಗಿ ಕುಳಿತು ಯಾವುದೋ ಯೋಚನೆಯಲ್ಲಿ ಮುಳುಗಿ ಗಂಟೆಗಟ್ಟಲೆ ಕುಳಿತಿರುತ್ತಿದ್ದನು. ಹೊರಪ್ರಪಂಚವನ್ನು ಕಣ್ಣಾರೆ ಕಂಡು ತಿಳಿಯಬೇಕೆಂಬ ತನ್ನ ಆಸೆಯನ್ನು ಒಂದು ದಿನ ಸಿದ್ಧಾರ್ಥನು ತಂದೆಗೆ ಹೇಳಿದನು. ಶುದ್ಧೋದನನು ಬೇಡವೆನ್ನಲಿಲ್ಲ.

"ಮುಂದೆ ತಾನೇ ಆಳಬೇಕಾದ ದೇಶವನ್ನೂ ಪ್ರಜೆಗಳನ್ನೂ ರಾಜಕುಮಾರನು ಕಂಡು ಅರಿಯಬೇಕಾದುದು ಸಹಜವೇ. ಅದಕ್ಕೆ ಈಗ ಸಮಯ ಕೂಡಿ ಬಂದಿದೆ" ಎಂದನು.

ನಗರವು ಸಿದ್ಧಾರ್ಥನ ನೋಟಕ್ಕೆ ಅಂದವಾಗಿ ಕಾಣುವಂತೆ ಗುಡಿಸಿ ಚೊಕ್ಕಟವಾಗಿರಬೇಕೆಂದು ಮಹಾರಾಜನ ಆಜ್ಞೆಯಾಯಿತು. ಅವನ ಸುಖಾಗಮನಕ್ಕೆ ರಸ್ತೆಯುದ್ದಕ್ಕೂ ತೋರಣಗಳನ್ನು ಕಟ್ಟಿದರು. ಎಲ್ಲಾ ಮನೆಗಳೂ ಬಣ್ಣಗಳಿಂದ ಅಲಂಕರಿಸಲ್ಪಟ್ಟವು. ರೋಗಿಗಳು, ದರಿದ್ರರು, ಮುದುಕರು ರಾಜಕುಮಾರನ ಕಣ್ಣಿಗೆ ಬೀಳಬಾರದೆಂಬ ಆಜ್ಞೆಯಾಗಿತ್ತು. ಜನರ ಯಾವುದೇ ರೀತಿಯ ಕಷ್ಟವಾಗಲೀ ತನ್ನ ಮಗನ ದೃಷ್ಟಿಗೆ ಬೀಳದಂತೆ ಶುದ್ಧೋದನನು ಮುಂಜಾಗ್ರತೆ ವಹಿಸಿದ್ದನು.

ಥಳಥಳಿಸುವ ನಾಲ್ಕು ಬಿಳಿ ಕುದುರೆಗಳನ್ನು ರಾಜಕುಮಾರನ ಸಾರೋಟಿಗೆ ಹೂಡಿದ್ದರು. ರಾಜರಥದಲ್ಲಿ ಎತ್ತರದಲ್ಲಿ ಸಿದ್ಧಾರ್ಥನು ಕುಳಿತಿದ್ದನು. ಸಾರಥಿ ಚನ್ನನು ರಥವನ್ನು ನಿಧಾನವಾಗಿ ರಾಜಬೀದಿಯಲ್ಲಿ ನಡೆಸುತ್ತಿದ್ದನು. ರಸ್ತೆಯ ಇಕ್ಕೆಲಗಳಲ್ಲಿಯೂ ಜನರು ನಿಂತು ರಾಜಕುಮಾರನನ್ನು ನೋಡಿ ಜಯಕಾರ ಮಾಡುತ್ತಾ ಅಭಿನಂದಿಸಿದರು. ಸಿದ್ಧಾರ್ಥನು ಪ್ರಜೆಗಳ ವಿಶ್ವಾಸ, ಶುಭಾಶಯಗಳನ್ನು ಕೈಮುಗಿದು ಸ್ವೀಕರಿಸಿದನು. ಪ್ರಜೆಗಳು ಸುಖದಿಂದ ನಲಿಯುತ್ತಿದ್ದಾರೆ, ಲೋಕವು ನಿಜವಾಗಿಯೂ ಸುಖಮಯವಾಗಿದೆ ಎಂದು ತಿಳಿದನು. ಆದರೂ ಸಹ ನಗರವನ್ನು ಇನ್ನೂ ಸಾವಕಾಶವಾಗಿ ನೋಡಬೇಕೆಂದು ಆಸೆ ಪಟ್ಟನು.

"ಈ ರಸ್ತೆಯಲ್ಲಿ ಹೋಗೋಣ ನಡೆ ಚನ್ನ" ಎಂದು ಹೇಳಲು ಚನ್ನನು ಆ ಸಣ್ಣ ರಸ್ತೆಯಲ್ಲೇ ಸಾರೋಟನ್ನು ನಡೆಸಿದನು. ಅಲ್ಲಿಯ ಜನರಿಗೆ ರಾಜಕುಮಾರನ ಆಗಮನ ತಿಳಿದಿರಲಿಲ್ಲ. ಈ ಹಾದಿಯಲ್ಲಿ ಸುಖಾಗಮನ ಕೋರುವ ತೋರಣ ಇರಲಿಲ್ಲ. ಸಾಮಾನ್ಯ ಜನರಿಂದಲೂ, ಧೂಳು ಕಸದಿಂದಲೂ ರಸ್ತೆ ತುಂಬಿತ್ತು.

ಬೆನ್ನು ಬಗ್ಗಿದ್ದ ಮುದುಕನೊಬ್ಬನು ಊರುಗೋಲಿನ ಸಹಾಯದಿಂದ ತೂರಾಡುತ್ತಾ ನಡೆಯುತ್ತಿದ್ದನು. ಹಣ್ಣು ಮುದುಕನೊಬ್ಬನು ಭಿಕ್ಷೆ ಬೇಡುತ್ತಿರುವ ದೃಶ್ಯ ಇದುವರೆವಿಗೂ ಸಿದ್ಧಾರ್ಥನ ಕಣ್ಣಿಗೆ ಬಿದ್ದಿರಲಿಲ್ಲ.



ಸಿದ್ಧಾರ್ಥನು ಆಶ್ಚರ್ಯಪಡುತ್ತಾ "ಯಾರೀತ?" ಎಂದು ಚನ್ನನನ್ನು ಕೇಳಿದನು.

"ಇವನೊಬ್ಬ ಮುದುಕ ದೊರೆ" ಚನ್ನ ಉತ್ತರ ಕೊಟ್ಟನು.

ಮುದಿತನ ಎಂದರೇನು ಎಂಬುದೇ ಸಿದ್ಧಾರ್ಥನಿಗೆ ತಿಳಿದಿರಲಿಲ್ಲ. ಜನ ಏಕೆ ಮುದುಕರಾಗುತ್ತಾರೆ? ಆ ಮುದುಕನನ್ನು ನೋಡಿ ಸಿದ್ಧಾರ್ಥನ ಕಣ್ಣು ತೆರೆಯಿತು. ಜೀವನ ಎಂದರೆ ಏನು ಎಂಬುದು ಅವನಿಗೀಗ ತಿಳಿಯಿತು.

ಅರಮನೆಗೆ ಹಿಂತಿರುಗಿದ ಸಿದ್ಧಾರ್ಥ ಬಹಳ ಬೇಸರಗೊಂಡ. ಈ ಸುದ್ದಿಯನ್ನು ತಿಳಿದ ಶುದ್ಧೋದನನು ತನ್ನ ಮಗನ ಮನಸ್ಸನ್ನು ಮುದಗೊಳಿಸಲು ನಾಟ್ಯ ಮತ್ತು ಸಂಗೀತ ಪ್ರವೀಣರನ್ನು ಕಳುಹಿಸಿಕೊಟ್ಟನು. ಇವರು ತಮ್ಮ ಕಲಾ ಚಾತುರ್ಯದಿಂದ ಸ್ವಲ್ಪ ಸಮಯದವರೆವಿಗೆ ಸಿದ್ಧಾರ್ಥನನ್ನು ಸಂತೋಷಪಡಿಸಿದರು. ಪುನಃ ಹೊರಪ್ರಪಂಚದ ದುಃಖವೇ ಅವನ ಮನಸ್ಸನ್ನು ಆವರಿಸಿಕೊಂಡಿತು. ಅವನು ತನ್ನ ಪ್ರಜೆಗಳನ್ನು ಇನ್ನೂ ಸಮೀಪದಿಂದ ನೋಡಬಯಸಿದನು.

ಅವನ ಎರಡನೇ ಸಲದ ಪ್ರಯಾಣಕ್ಕೆ ಏರ್ಪಾಟು ಮಾಡಲಾಯಿತು.

ಹಿಂದಿನಂತೆಯೇ ಪ್ರಜೆಗಳು ರಾಜಕುಮಾರನನ್ನು ಉತ್ಸಾಹದಿಂದಲೇ ಸ್ವಾಗತಿಸಿ ಆದರ ತೋರಿದರು. ಜನರು ಸುಖವಾಗಿರುವುದರಲ್ಲಿ ಸಂಶಯವೇ ಇಲ್ಲ ಎಂಬಂತೆ ತೋರಿತು. ಅಷ್ಟರಲ್ಲಿ, ಅರಮನೆಗೆ ಹಿಂತಿರುಗುತ್ತಿದ್ದ ಮಾರ್ಗದಲ್ಲಿ, ಕಷ್ಟದಿಂದ ಕಾಲೆಳೆಯುತ್ತಾ ನಡೆಯುತ್ತಿದ್ದ ಒಬ್ಬ ರೋಗಿಯನ್ನು ಸಿದ್ಧಾರ್ಥನು ಕಂಡನು. ರೋಗದಿಂದ ತೀರ ಬಳಲಿದ್ದ ಅವನು ತನ್ನ ಕಾಲುಗಳನ್ನು ಎಳೆದುಕೊಂಡು ನಡೆಯುತ್ತಿದ್ದ. ಸಿದ್ಧಾರ್ಥನು "ಈ ವ್ಯಕ್ತಿ ಯಾರು?" ಎಂದು ಚನ್ನನನ್ನು ಕೇಳಿದನು.

"ಅವನೊಬ್ಬ ರೋಗಿ" ಎಂದು ಚನ್ನನು ಉತ್ತರಿಸಿದನು.

ರಾಜಕುಮಾರನ ಮನಸ್ಸಿಗೆ ಆಘಾತವಾಯಿತು. "ಯಾವ ವ್ಯಕ್ತಿಯಾದರೂ ರೋಗಿ ಆಗಬಲ್ಲನೇ? ರೋಗವೆಂದರೆ ದುಃಖ, ಪೀಡೆ, ಕಷ್ಟ. ಅಂದರೆ ಜೀವನ ಎಂಬುದು ದುಃಖಸಾಗರವಾಗಿದೆ. ಹಾಗಾದರೆ ಈ ದುಃಖಗಳ ಕಾರಣವೇನು?" ಹೀಗೆ ಯೋಚಿಸಿದ ಸಿದ್ಧಾರ್ಥನು ನಗರವನ್ನು ಇನ್ನೊಮ್ಮೆ ನೋಡಲು ನಿಶ್ಚಯಿಸಿದನು. ಮೂರನೇ ಸಲ ನಗರ ವೀಕ್ಷಣೆಗೆ ಹೋದಾಗ ನಾಲ್ಕು ಜನರು ಒಂದು ಶವವನ್ನು ಹೊತ್ತುಕೊಂಡು ಹೋಗುತ್ತಿದ್ದುದನ್ನು ಕಂಡನು. "ಈ ಮನುಷ್ಯ ಸತ್ತಿದ್ದಾನೆ" ಎಂದು ಚನ್ನ ಹೇಳಿದನು.

"ಮುದಿತನ ! ರೋಗ !! ಮರಣ !!! ಈ ಲೋಕವೆಲ್ಲಾ ದುಃಖದಿಂದಲೇ ತುಂಬಿದೆ" ಎಂದು ಅವನ ಕರುಣೆಯಿಂದ ತುಂಬಿದ ಮನ ಮಿಡಿಯಿತು.

ಮತ್ತೊಮ್ಮೆ ನಗರ ಸಂಚಾರಕ್ಕೆ ತನ್ನ ಸಾರೋಟಿನಲ್ಲಿ ಹೊರಟಾಗ ದಾರಿಯಲ್ಲಿ ಕಾವಿ ವಸ್ತ್ರವನ್ನು ಧರಿಸಿದ್ದ ಸಂನ್ಯಾಸಿಯೊಬ್ಬನನ್ನು ಕಂಡನು. ಅವನೊಬ್ಬ ಸಾಧು ಎಂದು ಚನ್ನ ಹೇಳಿದನು. ಇವನು ವೈರಾಗ್ಯ ಪಡೆದಿರುವುದನ್ನು ರಾಜಕುಮಾರನು ಗಮನಿಸಿದನು. ಅಂದರೆ ಅವನು ಸಂಸಾರದ ಸುಖ-ದುಃಖಗಳಿಂದ ನಿರ್ಲಿಪ್ತನಾಗಿ ಇದ್ದನು. ರಾಜಕುಮಾರನ ಮನಸ್ಸಿನಲ್ಲಿ ಬೆಳಕಿನ ಕಿರಣ ಮೂಡಿತು. ಅವನು ಜೀವನದ ಒಂದು ದೊಡ್ಡ ಸತ್ಯವನ್ನು ಕಂಡು ಕೊಂಡನು. ಸಂಸಾರ ಎಂಬುದು ಒಂದು ದೊಡ್ಡ ದುಃಖಸಾಗರವಾಗಿದೆ. ಆಸೆ, ಮಮತೆ, ಬಂಧನ ಈ ದುಃಖವನ್ನು ಹೆಚ್ಚಿಸಿವೆ. ಈ ದುಃಖಗಳಿಂದ ಬಿಡುಗಡೆ ಹೊಂದುವುದೇ ಮನುಷ್ಯನ ಗುರಿಯಾಗಬೇಕು. ರಾಜವಿಲಾಸ ಮತ್ತು ಭೋಗಗಳನ್ನು ತ್ಯಜಿಸಿ ತಾನೂ ಸಂನ್ಯಾಸಿಯಾಗಬೇಕೆಂದು ರಾಜಕುಮಾರನು ನಿಶ್ಚಯಿಸಿದನು.





ಈ ಬಗ್ಗೆ ಇನ್ನೂ ಚಿಂತಿಸುತ್ತಿರುವಾಗಲೇ ಸಿದ್ಧಾರ್ಥನ ಮಗನ ಜನ್ಮವಾಯಿತು. ಪುಟ್ಟ ಮಗನಿಗೆ ರಾಹುಲನೆಂದು ಹೆಸರಿಟ್ಟರು. ಅವನ ಉದ್ವೇಗ ಹೆಚ್ಚಾಯಿತು. ಪ್ರಾಪಂಚಿಕ ಮಾಯಾಜಾಲದಲ್ಲಿ ಸಿಲುಕಿ ತನ್ನ ಜೀವನವನ್ನು ವ್ಯರ್ಥಗೊಳಿಸುವುದು ಅವನ ಉದ್ದೇಶವಾಗಿರಲಿಲ್ಲ. ಪುತ್ರ ಪ್ರೇಮವೂ ಸಹ ಅವನನ್ನು ತಡೆಯಲಿಲ್ಲ. ಸಾಧ್ಯವಾದಷ್ಟು ಬೇಗ ಗೃಹತ್ಯಾಗ ಮಾಡಬೇಕೆಂದು ಅವನು ನಿಶ್ಚಯಿಸಿದನು.

ಸಿದ್ಧಾರ್ಥನ ವಯಸ್ಸು ಆಗ ಇಪ್ಪತ್ತೊಂಬತ್ತು ವರ್ಷಗಳಾಗಿತ್ತು.

ಒಂದು ದಿನ ಮಧ್ಯ ರಾತ್ರಿಯಲ್ಲಿ ಅವನಿಗೆ ಎಚ್ಚರವಾಯಿತು. ಮಗು ರಾಹುಲನ ಮೇಲೆ ಒಂದು ಕೈಯನ್ನಿಟ್ಟು ಯಶೋಧರೆ ಗಾಢ ನಿದ್ರೆಯಲ್ಲಿದ್ದಳು. ತನ್ನ ಪ್ರೀತಿಯ ಕಂದನನ್ನು ಕಡೆಯ ಸಲ ಕೈಯಾರೆ ಎತ್ತಿ ಮುದ್ದಿಸಬೇಕೆಂದು ಆಸೆಯಾಯಿತು. ಆದರೆ ಹೆಂಡತಿಗೆ ಎಚ್ಚರವಾದೀತೆಂದು ತನ್ನ ಆಸೆಯನ್ನು ಹತ್ತಿಕ್ಕಿದನು. ಆ ಕ್ಷಣವೇ, ಇನ್ನೊಮ್ಮೆಯೂ ಹಿಂತಿರುಗಿ ನೋಡದೆ, ಅರಮನೆಯನ್ನು ಬಿಟ್ಟು ಹೊರಟನು.

ಸಿದ್ಧಾರ್ಥನನ್ನು ಜನರು ಈಗ 'ಶಾಕ್ಯಮುನಿ', ಅಂದರೆ ಶಾಕ್ಯ ವಂಶದ ಮುನಿ, ಎಂದು ಕರೆಯಲಾರಂಭಿಸಿದರು. ಒಬ್ಬ ಭಿಕ್ಷುವಿನ ರೂಪದಲ್ಲಿ ಅಲೆಯುತ್ತಾ ಅವನು ಪ್ರಸಿದ್ಧವಾದ ವೈಶಾಲಿ ಎಂಬ ನಗರಕ್ಕೆ ಬಂದನು. ಅಲ್ಲಿ 'ಅರ್ಧಕಲಮ'

ಎಂಬ ಋಷಿಗಳ ಆಶ್ರಮದಲ್ಲಿ ಕೆಲವು ಕಾಲ ತಂಗಿದನು. ಅವರ ಬಳಿ ಪ್ರಾಚೀನ ಭಾರತದ 'ಷಟ್‌ದರ್ಶನ್' ಶಾಸ್ತ್ರಗಳ ಅಧ್ಯಯನ ಕೈಗೊಂಡನು. ಆದರೆ ಇದು ಅವನ ಮೇಲೆ ಯಾವುದೇ ರೀತಿಯ ಪ್ರಭಾವ ಬೀರಲಿಲ್ಲ. ಅವನು ತನ್ನ ಸತ್ಯ ಶೋಧನೆಯ ಹಾದಿಯಲ್ಲಿ ವೈಶಾಲಿಯಿಂದ ಮುಂದೆ ನಡೆದನು.

ಮುಂದೆ ಹೊರಟ ಶಾಕ್ಯಮುನಿ ಮಗಧ ರಾಜ್ಯದ ಪ್ರಖ್ಯಾತ ರಾಜಧಾನಿಯಾದ ರಾಜಗೃಹಕ್ಕೆ ಬಂದು ಅಲ್ಲಿನ ಪ್ರಖ್ಯಾತ ವಿದ್ವಾಂಸ ರುದ್ರಕನ ಆಶ್ರಮವನ್ನು ಸೇರಿದನು. ಜ್ಞಾನಾರ್ಜನೆ ಶಾಕ್ಯಮುನಿಯನ್ನು ಪ್ರಭಾವಿತಗೊಳಿಸಿದರೂ ಈ ಎಲ್ಲಾ ವಿದ್ಯೆಗಳಿಂದ ಸತ್ಯ ಶೋಧನೆ ಸಾಧ್ಯವಿಲ್ಲವೆಂಬುದು ಅವನಿಗೆ ಅರಿವಾಯಿತು. ಪುನಃ ತನ್ನ ಸತ್ಯ ಶೋಧನೆಯ ಮಾರ್ಗವನ್ನು ಹುಡುಕುತ್ತಾ ಆ ಆಶ್ರಮವನ್ನು ಬಿಟ್ಟು ಮುಂದೆ ಹೊರಟನು.

ತಪಸ್ಸು ಮಾಡಲು ಕುಳಿತರೆ ಸತ್ಯ ಶೋಧನೆಯಾದೀತೇ? ಈ ಯೋಚನೆಯೂ ಅವನಿಗೆ ಬಂದಿತು. ಆ ಪ್ರಯತ್ನವನ್ನೂ ಮಾಡಲು ಐವರು ಶಿಷ್ಯರೊಂದಿಗೆ ಕಾಡಿನಲ್ಲಿ ತಪಸ್ಸಿಗೆ ಕುಳಿತನು. ಅನೇಕ ಕಠಿಣ ವ್ರತಗಳಿಂದ, ದೇಹ ದಂಡನೆಯಿಂದ ಎಷ್ಟೋ ತಪಸ್ಸು ಮಾಡಿದರೂ ಸತ್ಯಶೋಧನೆ ಕೈಗೆ ಎಟುಕಲೇ ಇಲ್ಲ. ಕಡೆಗೆ ಕಠಿಣ ತಪಸ್ಸಿನಿಂದ ಸತ್ಯದ ಸಾಧನೆ ಅಸಾಧ್ಯ ಎಂದು ಆ ದಾರಿಯನ್ನೂ ಕೈಬಿಟ್ಟನು. ಅವನ ಐದು ಜನ ಶಿಷ್ಯರು ಈ ಶಾಕ್ಯಮುನಿಯು ಮತ್ತೆ ಸಂಸಾರಿಗಳ ದಾರಿ ಹಿಡಿಯುತ್ತಿದ್ದಾನೆಂದು ತಿಳಿದು ಇವನ ಸಂಗ ಬಿಟ್ಟು ಹೋದರು.

ಸಿದ್ಧಾರ್ಥನು ಪಕ್ಕದಲ್ಲೇ ಹರಿಯುತ್ತಿದ್ದ ನಿರಂಜನವೆಂಬ ನದಿಯಲ್ಲಿ ಸ್ನಾನಕ್ಕಿಳಿದನು. ತಪಸ್ಸಿನಿಂದ ಅಶಕ್ತವಾಗಿದ್ದ ಅವನ ದೇಹವನ್ನು ನದಿಯ ಅಲೆ ತನ್ನಲ್ಲಿ ಅಡಗಿಸಿಕೊಳ್ಳುವುದರಲ್ಲಿತ್ತು. ಹೇಗೋ ಅತಿ ಪ್ರಯಾಸದಿಂದ ದಡ ಸೇರಿ ಅವನು ಬದುಕಿದನು. ಹಸಿವಿನಿಂದ ಬಳಲುತ್ತಿದ್ದ ಇವನನ್ನು ನೋಡಿದ ಸುಜಾತ ಎಂಬ ರೈತ ಹುಡುಗಿ ಒಂದು ಬಟ್ಟಲು ಪಾಯಸವನ್ನು ಅವನಿಗೆ ಕೊಟ್ಟಳು. ಅದನ್ನು ಸೇವಿಸಿದ ಸಿದ್ಧಾರ್ಥನಿಗೆ ಸ್ವಲ್ಪ ಶಕ್ತಿ ಬಂದಿತು.

ಏಕಾಗ್ರತೆಯಿಂದ ಕೂಡಿದ ಧ್ಯಾನದಿಂದಲೇ ಸತ್ಯವನ್ನು ಕಾಣಬಹುದೆಂದು ಕಟ್ಟಕಡೆಗೆ ಸಿದ್ಧಾರ್ಥನು ನಿಶ್ಚಯ ಮಾಡಿದನು. ಗಯಾ ಕ್ಷೇತ್ರದ ಹೊರವಲಯದಲ್ಲಿದ್ದ ಒಂದು ಮನಮೋಹಕ ಸ್ಥಳವನ್ನಾರಿಸಿಕೊಂಡು ಅಶ್ವತ್ಥ ಮರದ ಕೆಳಗೆ ಪದ್ಮಾಸನದಲ್ಲಿ ಕುಳಿತು ಧ್ಯಾನ ಮಗ್ನನಾದನು. ಸತ್ಯದ ದರ್ಶನವಾಗುವವರೆಗೂ



ಈ ಸ್ಥಳದಿಂದ ಏಳುವುದೇ ಇಲ್ಲ ಎಂದು ನಿಶ್ಚಯ ಮಾಡಿದನು.

ಸಿದ್ಧಾರ್ಥನು ಏಕಾಗ್ರತೆಯಿಂದ ಧ್ಯಾನಕ್ಕೆ ಕುಳಿತನು. ಇವನು ಹೀಗೆ ಧ್ಯಾನ ಮಾಡುವುದು ಮಾರ ಎಂಬ ರಾಕ್ಷಸನ ಕ್ರೋಧಕ್ಕೆ ಕಾರಣವಾಯಿತು. ಜ್ಞಾನೋದಯವಾಗಿ ಹೋದರೆ ಅವನು ಕೂಡಲೇ ಆ ಸತ್ಯವನ್ನು ಜನರಿಗೆ ಉಪದೇಶಿಸಿ ಲೋಕದಲ್ಲಿ ತನ್ನನ್ನು ಯಾರೂ ಲಕ್ಷಿಸುವುದಿಲ್ಲವೆಂಬ ಭಯ ದುಷ್ಟ ಶಕ್ತಿಯಾದ ಮಾರನಿಗೆ ಉಂಟಾಯಿತು.

ಆದುದರಿಂದ ಮಾರನು ತನ್ನ ಮಾಯಾಜಾಲದಿಂದ ಸಿದ್ಧಾರ್ಥನಿಗೆ ನಾನಾ ರೀತಿಯ ಆಸೆಗಳನ್ನು ತೋರಿಸಲು ಪ್ರಾರಂಭ ಮಾಡಿದನು. ಕುಳಿತಲ್ಲಿಯೇ ಅವನ ಅರಮನೆಯೂ, ಸುಂದರಿಯಾದ ಹೆಂಡತಿ ಯಶೋಧರೆಯೂ, ಪುಟ್ಟ ಮಗ ರಾಹುಲನೂ ಅವನ ದೃಷ್ಟಿಗೆ ಬೀಳುವಂತೆ ಮಾಡಿದನು. ಆದರೆ ಸಿದ್ಧಾರ್ಥನು ಇವಕ್ಕೆಲ್ಲಾ ಬಲಿಯಾಗದೆ ತನ್ನ ಧ್ಯಾನವನ್ನು ಮುಂದುವರೆಸಿದನು. ಪುನಃ ಮಾರನು ಅವನ ಮುಂದೆ ದೊಡ್ಡ ಬಿರುಗಾಳಿಯನ್ನೂ, ಭಯಂಕರ ಸುಂಟರಗಾಳಿಯನ್ನೂ ತಂದು ಅವನ ಧ್ಯಾನವನ್ನು ಭಗ್ನಗೊಳಿಸಲು ಪ್ರಯತ್ನಿಸಿದನು. ಆದರೆ ಸಿದ್ಧಾರ್ಥನು ತನ್ನ ಅಚಲ ಏಕಾಗ್ರತೆಯನ್ನು ಕಳೆದುಕೊಳ್ಳಲಿಲ್ಲ. ಛಲಬಿಡದ ಮಾರನು ಈಗ ತನ್ನ ಕಟ್ಟಕಡೆಯ ಅಸ್ತ್ರವನ್ನು ಪ್ರಯೋಗಿಸಿದನು. ಇಚ್ಛಾ, ಸೌಖ್ಯಾ ಮತ್ತು ವಾಸನಾ ಎಂಬ ತನ್ನ ಮೂವರು ಹೆಣ್ಣು ಮಕ್ಕಳನ್ನು ಅವನ ಮುಂದೆ ನೃತ್ಯವಾಡಿಸಿ ಅವನ ಚಿತ್ತೈಕಾಗ್ರತೆಯನ್ನು ಕೆಡಿಸಲು ನೋಡಿದನು. ಆದರೆ ಸಿದ್ಧಾರ್ಥನ ಅಚಲ ನಿರ್ಧಾರದ ಮುಂದೆ ಈ ಆಸೆಯ ಆಟಗಳು ಯಾವುದೇ ಪರಿಣಾಮವನ್ನೂ ಬೀರಲಾರದೇ ಹೋದವು. ಎಲ್ಲರನ್ನೂ ಜಯಿಸಿ ಇನ್ನೂ ಹೆಚ್ಚಿನ ಏಕಾಗ್ರತೆಯಿಂದ ಧ್ಯಾನವನ್ನು ಮುಂದುವರಿಸಿದನು.

ಕಡೆಗೆ ನಲವತ್ತೊಂಭತ್ತನೆಯ ದಿನ ಅವನಿಗೆ ಸತ್ಯದ ದರ್ಶನವಾಯಿತು. ಜ್ಞಾನೋದಯವಾದ ಮೇಲೆ ಆತನೇ ಜ್ಞಾನಿಯಾಗಿ ಬುದ್ಧನೆನಿಸಿಕೊಂಡನು. ಯಾವ ಮರದ ಬುಡದಲ್ಲಿ ಅವನು ಧ್ಯಾನದಲ್ಲಿ ಕುಳಿತು ಜ್ಞಾನವನ್ನು ಪಡೆದನೋ ಆ ವೃಕ್ಷಕ್ಕೆ ಬೋಧಿ ವೃಕ್ಷವೆಂದೇ ಹೆಸರಾಯಿತು.

# ಶ್ರೇಷ್ಠ ಮಾರ್ಗ

ರಾಜಕುಮಾರ ಸಿದ್ಧಾರ್ಥನು ಈಗ ಗೌತಮ ಬುದ್ಧನಾದನು. ಸಂಸಾರಿಕ ಅಜ್ಞಾನ ಮತ್ತು ಅಂಧಕಾರವನ್ನು ದೂರ ಮಾಡಿ ಜ್ಞಾನವನ್ನು ಹರಡಬೇಕೆಂಬ ಆಸೆ ಬುದ್ಧನಲ್ಲಿ ಅಂಕುರಿಸಿತು. ಈ ಜ್ಞಾನಬೋಧನೆ ಅಷ್ಟು ಸುಲಭವಲ್ಲ ಎಂಬುದನ್ನು ಅವನು ಅರಿತಿದ್ದನು. ಪರರ ಹಿತ ಅವನಲ್ಲಿ ಹೆಚ್ಚಾಗಿದ್ದರಿಂದ ಸತ್ಯಬೋಧನೆ ಕೈಗೊಂಡು ಪ್ರಪಂಚ ದಲ್ಲಿ ಅದನ್ನು ಸಾರಬೇಕೆಂದು ಅವನು ಈ ಮೊದಲೇ ನಿಶ್ಚಯಿಸಿದ್ದನು.

ತನ್ನನ್ನು ಬಿಟ್ಟು ಬೇರೆ ದಾರಿ ಹಿಡಿದು ಹೋಗಿದ್ದ ಐವರು ಶಿಷ್ಯರನ್ನು ಅವನು ಮೊದಲು ಜ್ಞಾಪಿಸಿಕೊಂಡನು. ಅವರಿನ್ನೂ ವಾರಣಾಸಿಯ ಹತ್ತಿರದ ಸಾರನಾಥದಲ್ಲೇ ತಪಸ್ಸು ಮಾಡುತ್ತಿದ್ದರು. ಆದ ಕಾರಣ ಅವನು ಸಾರನಾಥದ ಕಡೆ ಪ್ರವಾಸ ಮಾಡಿದನು.

ಆ ಹಳೆಯ ಶಿಷ್ಯರಲ್ಲೊಬ್ಬನು ತನ್ನ ಗುರು ಬರುತ್ತಿರುವುದನ್ನು ದೂರದಿಂದಲೇ ಗಮನಿಸಿ "ನಮ್ಮ ಹಿಂದಿನ ಗುರು ಗೌತಮರು ಬರುತ್ತಿದ್ದಾರೆ" ಎಂದನು. "ಓ, ನಮ್ಮನ್ನು ನಡುದಾರಿಯಲ್ಲಿ ಬಿಟ್ಟು ಹೋದ ನಾಸ್ತಿಕನಲ್ಲವೇ" ಎಂದು ವ್ಯಂಗ್ಯದಿಂದ ಎರಡನೆಯವನು ಹೇಳಿದನು. "ಓ, ಇವನು ಇನ್ನೂ ಸಂನ್ಯಾಸಿಯ ನಾಟಕವನ್ನೇ ಆಡುತ್ತಿದ್ದಾನೆ" ಎಂದು ಮೂರನೆಯವನು ಹಾಸ್ಯ ಮಾಡಿದನು. ಗೌತಮ ಬುದ್ಧನನ್ನು ಪೂರ್ತಿಯಾಗಿ ಬಹಿಷ್ಕಾರ ಮಾಡುವುದಾಗಿ ಅವರೆಲ್ಲರೂ ನಿಶ್ಚಯಿಸಿದರು.

ಯಾವುದೇ ವ್ಯವಹಾರದಲ್ಲಿ ಸಂಯಮವಿರಬೇಕು, ಅತಿ ವ್ಯಾಪ್ತಿ ಸಲ್ಲದು ಎಂದೇ ಅವನು ತನ್ನ ಉಪದೇಶವನ್ನು ಪ್ರಾರಂಭಿಸಿದನು. "ಜೀವನದಲ್ಲಿ ಅತಿಯಾಗಿ ಸುಖ-ಸಂತೋಷಗಳನ್ನೇ ಬಯಸುವುದು ತಪ್ಪು; ಅಂತೆಯೇ ದೇಹವನ್ನು ದಂಡಿಸುವುದೂ ತಪ್ಪು. ಮಧ್ಯಮಾರ್ಗವನ್ನು ಅನುಸರಿಸುವವನೇ ಬುದ್ಧಿವಂತ. ಸತ್ಯದ ಅನ್ವೇಶಣೆಗೆ ಇದೇ ಸರಿಯಾದ ಮಾರ್ಗ".

ಸಂಸಾರವು ದುಃಖಸಾಗರ, ಅದಕ್ಕೆ ಕಾರಣ ಪ್ರಾಪಂಚಿಕ ಸುಖ ಜೀವನದ ಆಸೆ ಎಂದು ಘೋಷಿಸಿದನು. ಇದರಿಂದ ಬಿಡುಗಡೆ ಪಡೆಯಲು ಅಷ್ಟ ಮಾರ್ಗವನ್ನು ಅವಲಂಬಿಸಬೇಕು ಎಂದು ಅವನು ಉಪದೇಶಿಸಿದನು. ಈ ಎಂಟು ಆದರ್ಶಗಳನ್ನು ಅನುಸರಿಸುವುದರ ಮೂಲಕ ನಿರ್ವಾಣ ಪ್ರಾಪ್ತಿ ಆಗುವುದೆಂದು ಅವನು ಹೇಳಿದನು. ಬುದ್ಧನ ಈ ಉಪದೇಶಗಳನ್ನು "ನಾಲ್ಕು ಆರ್ಯ ಸತ್ಯಗಳು" ಎಂದು ಹೇಳುತ್ತಾರೆ.

ಗೌತಮ ಬುದ್ಧನ ಅಷ್ಟ ಮಾರ್ಗಗಳೆಂದರೆ: ಶುದ್ಧ ದೃಷ್ಟಿ, ಶುದ್ಧ ಸಂಕಲ್ಪ, ಶುದ್ಧ ಮಾತು, ಶುದ್ಧ ಕರ್ಮ, ಶುದ್ಧ ಜೀವನ, ಶುದ್ಧ ವ್ಯಾಯಾಮ, ಶುದ್ಧ ಸ್ಮೃತಿ ಹಾಗೂ ಶುದ್ಧ ಸಮಾಧಿ. ಇದೇ ಧರ್ಮ, ಇದೇ ಸನ್ಮಾರ್ಗ. ಮಾನವ ಜನಾಂಗ ಈ ಸತ್ಯ ಮಾರ್ಗದಲ್ಲಿ ನಡೆಯಬೇಕೆಂದು ಗೌತಮ ಬುದ್ಧ ಹೇಳಿದ.

ಸಾರನಾಥದಲ್ಲಿ ನೀಡಿದ ಈ ಪ್ರಥಮ ಉಪದೇಶ ಬುದ್ಧನ ಪ್ರಾರಂಭ. ಉಪದೇಶವಾಯಿತು. ಆನಂತರ ದೇಶದ ವಿವಿಧ ಭಾಗಗಳನ್ನು ಸುತ್ತಿ ತನ್ನ ಜ್ಞಾನದ

ಉಪದೇಶ ನೀಡುವುದರಲ್ಲಿ ಅವನ ಉಳಿದ ಜೀವನ ಕಳೆಯಿತು. ಆಗಿನ ಕಾಲದಲ್ಲಿ ಪಂಡಿತರ ಭಾಷೆ ಸಂಸ್ಕೃತವಾಗಿತ್ತು. ಆದರೆ ಸರ್ವ ಸಾಧಾರಣ ಮನುಷ್ಯನಿಗೂ ಅರ್ಥವಾಗಲೆಂದು ಬುದ್ಧನು ಸಾಮಾನ್ಯ ಜನರ ಭಾಷೆಯಾದ ಪಾಳೀ ಭಾಷೆಯಲ್ಲೇ ಪ್ರವಚನ ನೀಡುತ್ತಿದ್ದನು.

ಬುದ್ಧನ ನೀತಿ-ವಚನಗಳು ಎಲ್ಲರಿಗೂ ಸುಲಭವಾಗಿ ಅರ್ಥವಾಗುವಂತೆ ತಿಳಿಯಾಗಿದ್ದುವು. ಅವನು 'ಕರ್ಮವಾದ' ವನ್ನೂ ನಂಬಿದ್ದನು. ಆ ಪ್ರಕಾರ ಆತ್ಮಕ್ಕೆ ನಾಶವಿಲ್ಲವೆಂದೂ ಮರಣಾದ ನಂತರ ಹಿಂದಿನ ಜನ್ಮದ ಒಳ್ಳೆಯ ಅಥವಾ ಕೆಟ್ಟ



ನಡತೆಯ ಪ್ರಕಾರ ಆಯಾ ಕರ್ಮಶೇಷವನ್ನು ಅನುಭವಿಸಲು ಆಯಾ ಆತ್ಮ ಪುನಃ ಜನ್ಮ ಪಡೆಯುವುದು ಸಹಜವೆಂದೂ ತಿಳಿಸಿದನು. ಅಂದರೆ ಪ್ರತಿಯೊಬ್ಬನೂ ಈ ಜನ್ಮದಲ್ಲಿ ಹಿಂದಿನ ಜನ್ಮಗಳ ಒಳ್ಳೆಯ ಅಥವಾ ಕೆಟ್ಟ ಕರ್ಮದ ಫಲವನ್ನು ಅನುಭವಿಸುತ್ತಾನೆ.

ಜೀವನದ ಪರಮಾರ್ಥ ನಿರ್ವಾಣವಾಗಿರಬೇಕು. ನಿರ್ವಾಣ ಪ್ರಾಪ್ತವಾದರೆ ಜನನ-ಮರಣವೆಂಬ ಬಂಧನದಿಂದ ಬಿಡುಗಡೆಯಾಗಿ ಮನುಷ್ಯ ಬ್ರಹ್ಮಮಯನಾಗುತ್ತಾನೆ. ತಾನು ಸಾರಿದ 'ಮಧ್ಯಮ ಮಾರ್ಗ'ವನ್ನು ಅವಲಂಬಿಸಿ ಉತ್ತಮವಾದ ನಡತೆಯಿಂದ ಬಾಳಿದರೆ ಸುಲಭವಾಗಿ ಜ್ಞಾನವನ್ನು ಪಡೆದು ಜೀವನದ ಗುರಿಯಾದ

ನಿರ್ವಾಣವನ್ನು ಸಾಧಿಸಬಹುದು ಎಂದು ಹೇಳಿದನು.

ಬುದ್ಧನು ಅಹಿಂಸೆಯ ಅವತಾರಪುರುಷನಾಗಿದ್ದನು. ಅವನ ದೃಷ್ಟಿಯಲ್ಲಿ ಎಲ್ಲಾ ಪ್ರಾಣಿಗಳ ಜೀವವೂ ಮಹತ್ವವಾದುವು. ಯಾವುದೇ ಜೀವವನ್ನು ಕೊಲ್ಲುವುದು ಮಹಾಪಾಪ. ಕಣ್ಣಿಗೆ ಕಾಣುವ ಹಿಂಸೆಯ ಜೊತೆಗೆ ಪರೋಕ್ಷವಾಗಿ ಕಾರ್ಯದಿಂದಾಗಲೀ ಮಾತಿನಿಂದಾಗಲೀ ಆಗಬಹುದಾದ ಯಾವುದೇ ರೀತಿಯ ಹಿಂಸೆಯನ್ನು ಅವನು ವಿರೋಧಿಸಿದನು.

"ಮನುಷ್ಯನ ಮೊದಲ ಕರ್ತವ್ಯವೆಂದರೆ ಶಿಸ್ತಿನ ಜೀವನ. ಶಿಸ್ತಿಲ್ಲದೆ ಆದರ್ಶ ಜೀವನ ಸಾಧ್ಯವಿಲ್ಲ. ಯಾರು ಸಮಯಕ್ಕೆ ಸರಿಯಾಗಿ ಕೆಲಸ ಮಾಡುವುದಿಲ್ಲವೋ ಅವರು ಅವಿವೇಕಿಗಳು, ಸೋಮಾರಿಗಳು ಮತ್ತು ಅಂಥವರು ಎಂದಿಗೂ ಜ್ಞಾನ ಮಾರ್ಗವನ್ನು ಪಡೆಯಲಾರರು" ಎಂದು ಅವನು ಹೇಳಿದನು.

ಕರುಣೆಯೇ ಅತ್ಯುತ್ತಮ ಗುಣವೆಂದು ಬುದ್ಧನು ಬಗೆದನು. ಹುಡುಗನಾಗಿದ್ದಾಗಲೇ ಒಂದು ಸಣ್ಣ ಪಕ್ಷಿಗೆ ನೋವಾಗಿದ್ದಾಗ ಅವನ ಹೃದಯ ದಯೆಯಿಂದ ಕರಗಿಹೋಯಿತು. "ತಾಯಿ ತನ್ನ ಒಂದೇ ಮಗುವನ್ನು ಎಷ್ಟು ಎಚ್ಚರಿಕೆಯಿಂದ ಆರೈಕೆ ಮಾಡುತ್ತಾಳೋ ಅಂತೆಯೇ ಮನುಷ್ಯನು ವಿಶ್ವದ ಸಮಸ್ತ ಜೀವಿಯ ಬಗ್ಗೆಯೂ ಸಮಾನವಾದ ಆದರ ತೋರಬೇಕು" ಎಂದು ತಿಳಿಸಿದನು.

ಪ್ರೇಮದಿಂದ ಎಲ್ಲರನ್ನೂ ಗೆಲ್ಲಬಹುದು. ಹಿಂಸೆ ಮತ್ತು ದ್ವೇಷದಿಂದಲ್ಲ. ಹಿಂಸೆಯನ್ನು ನಿರಾಕರಿಸುವುದೇ ಅಹಿಂಸೆ. ಅದೇ ರೀತಿ ದ್ವೇಷವನ್ನು ನಿರಾಕರಿಸುವುದೇ ಪ್ರೀತಿ. ದ್ವೇಷದ ಪ್ರತೀಕಾರ ದ್ವೇಷವಲ್ಲ, ಪ್ರೀತಿ ಎಂದು ಬುದ್ಧನು ಉಪದೇಶಿಸಿದನು.

# ಸಂಘ

ಸಾರನಾಥದಲ್ಲಿ ನೀಡಿದ ಜ್ಞಾನೋಪದೇಶದ ಪರಿಣಾಮವಾಗಿ ಬುದ್ಧನ ಹಳೆಯ ಐವರು ಶಿಷ್ಯರು ಕೂಡಲೇ ಅವನ ಮತವನ್ನು ಅವಲಂಬಿಸಿ ಭಿಕ್ಷುಗಳಾದರು. ಈ ಬೌದ್ಧ ಸಂನ್ಯಾಸಿಗಳ ಮೊದಲ ತಂಡ ಒಂದು ಸಂಘವಾಯಿತು. ಅಲ್ಲಿಂದ ಮುಂದೆ ಬುದ್ಧನ ಉಪದೇಶ ಹರಡಿದಂತೆಲ್ಲಾ ಅನೇಕ ಜನರು ಸಂಘವನ್ನು ಸೇರಿದರು.

ವಾರಣಾಸಿಯಲ್ಲಿ ಯಶನೆಂಬ ಧನಿಕನಾದ ವ್ಯಕ್ತಿ ಆ ಕಾಲದಲ್ಲಿ ವಾಸಿಸುತ್ತಿದ್ದನು. ಆತನು ಜೀವನದಲ್ಲಿ ತುಂಬಾ ಬೇಸರಗೊಂಡು ಒಂದು ದಿನ ಮನೆ ಬಿಟ್ಟು ಗೊತ್ತು ಗುರಿ ಇಲ್ಲದೆ ಹೊರಟುಬಿಟ್ಟನು. ಅವನು ತನ್ನ ದಾರಿಯಲ್ಲೇ ಅದೃಷ್ಟವಶಾತ್ ಬುದ್ಧ ಗುರುವನ್ನು ಸಂಧಿಸಿ ಅವನ ದಿವ್ಯ ಕಾಂತಿಗೆ ಮಾರುಹೋಗಿ ಅವನಿಗೆ ನಮಸ್ಕರಿಸಿದನು. ಬುದ್ಧನು ಆತನಿಗೆ ತನ್ನ ಶ್ರೇಷ್ಠ ಮಾರ್ಗವನ್ನು ಉಪದೇಶ ಮಾಡಿದಾಗ ಯಶನು ಭಿಕ್ಷುವಾಗಿ ಸಂಘವನ್ನು ಸೇರಿದನು.

ಯಶನ ತಂದೆ ಮಗನನ್ನು ಹುಡುಕಿಕೊಂಡು ಬಂದನು. ಆತನೂ ಸಹ ಬುದ್ಧನಿಂದ ಪ್ರೇರಿತನಾಗಿ ಬೌದ್ಧ ಧರ್ಮವನ್ನು ಒಪ್ಪಿಕೊಂಡನು. ಆದರೆ ತನ್ನ ಮನೆಯನ್ನೂ, ಸಂಸಾರವನ್ನೂ ತ್ಯಜಿಸಲಿಲ್ಲ. ಅವನು ಒಬ್ಬ ಸಾಮಾನ್ಯ ಶಿಷ್ಯನಾಗಿ ಮುಂದುವರಿದನು. ಅನಂತರ ಬುದ್ಧನೇ ಯಶನ ಮನೆಗೆ ಬಂದು ಯಶನ ತಾಯಿ ಮತ್ತು ಹೆಂಡತಿಗೆ ತನ್ನ ಶ್ರೇಷ್ಠ ಮಾರ್ಗದ ಬಗ್ಗೆ ಉಪದೇಶ ನೀಡಿದನು. ಅವರೂ ಸಹ ಬುದ್ಧನ ಸಾಮಾನ್ಯ ಶಿಷ್ಯರಾದರು.

ತನ್ನ ಅನುಯಾಯಿಗಳೆಲ್ಲರೂ ಸಂನ್ಯಾಸಿ ಅಥವಾ ಸಂನ್ಯಾಸಿನಿಯರಾಗಬೇಕೆಂದು ಬುದ್ಧನು ಅಪೇಕ್ಷಿಸಲಿಲ್ಲ. ಸಂಸಾರವನ್ನು ತ್ಯಜಿಸಿ ಬಾಳುವ ಇಚ್ಛೆಯೂ ಮನೋಧರ್ಮವೂ ಕೆಲವರಿಗೆ ಮಾತ್ರ ಇರುತ್ತದೆಂಬುದನ್ನು ಅವನು ತಿಳಿದಿದ್ದನು. ಆದ್ದರಿಂದ ಜನರು ತಾನು ತೋರಿಸಿಕೊಟ್ಟ ನೀತಿ ಮಾರ್ಗವನ್ನು ಅನುಸರಿಸಿ ಸಾಮಾನ್ಯ ಜೀವನ ನಡೆಸಿಕೊಂಡು ಹೋಗಬಹುದಾಗಿತ್ತು. ಅವರೆಲ್ಲರೂ ಬೌದ್ಧ ಮತದ ಲೌಕಿಕ ಅನುಯಾಯಿಗಳೆನಿಸಿಕೊಂಡರು. ಈ ಲೌಕಿಕ ಸಮಾಜಕ್ಕೆ ಸಂಘ, ಬುದ್ಧ ಮತ್ತು ಧಮ್ಮ (ಧರ್ಮ)ವೇ ಆಧಾರ ತತ್ವಗಳಾದವು.

ತಾನು ಕಟ್ಟಿದ ಸಂಘವನ್ನು ಬೆಳೆಸಲು ಬುದ್ಧನು ವಿಶೇಷವಾಗಿ ಶ್ರಮಿಸಿದನು. ಶಿಸ್ತಿನ ಜೀವನ ನಡೆಸುತ್ತಿದ್ದ ಕೆಲವು ಭಿಕ್ಕುಗಳ ಒಂದು ತಂಡವನ್ನು ರಚಿಸಿದನು. ಇವರು ದೇಶದಾದ್ಯಂತ ಸಂಚರಿಸಿ ಬೌದ್ಧ ಧರ್ಮವನ್ನು ಪ್ರಚಾರ ಮಾಡಿದರು.

ಬುದ್ಧನು ಅನೇಕ ಸಂನ್ಯಾಸಿಗಳೊಡನೆ ವಾದ ಮಾಡಿ ಜಯಿಸಿ ಅವರನ್ನು ಬೌದ್ಧ ಧರ್ಮದ ಕಡೆಗೆ ಒಲಿಸಿಕೊಂಡನು. ಈ ರೀತಿ ಒಲಿದು ಬಂದ ವೊದಲಿಗರ ಪೈಕಿ ಒಬ್ಬನು ಅಗ್ನಿಯನ್ನು ಆರಾಧಿಸುತ್ತಿದ್ದ ಕಾಶ್ಯಪ. ಈತನೇ ಮುಂದೆ ಮಹಾ ಕಾಶ್ಯಪನೆಂಬ ಹೆಸರಿನಿಂದ ಬುದ್ಧನ ನಂತರ ಸಂಘದ ಗದ್ದುಗೆ (ಗುರುಪೀಠ) ಯನ್ನು ವಹಿಸಿಕೊಂಡನು.

ಈ ಕಾಶ್ಯಪನೊಂದಿಗೆ ಅವನ ಐದುನೂರು ಶಿಷ್ಯರೂ ಸಂಘದ ಅನುಯಾಯಿಗಳಾದರು. ಮುಂದೆ ಕಾಶ್ಯಪನ ಇಬ್ಬರು ತಮ್ಮಂದಿರೂ ತಮ್ಮ ತಮ್ಮ ಮುನ್ನೂರು ಮತ್ತು ಇನ್ನೂರು ಮಂದಿ ಶಿಷ್ಯರೊಡನೆ ಸಂಘವನ್ನೇ ಆಶ್ರಯಿಸಿದರು. ಈ ರೀತಿ ಸಂಘವು ದೇಶದಾದ್ಯಂತ ಹರಡುತ್ತಾ ಬಂದಂತೆಲ್ಲಾ ಬುದ್ಧನೇ ಧರ್ಮ ಗುರುವೆಂಬ ಕೀರ್ತಿಯೂ ಬೆಳೆಯುತ್ತಾ ಬಂದಿತು.

ಆ ನಂತರ ಬುದ್ಧನು ತನ್ನ ಅನೇಕ ಅನುಯಾಯಿಗಳೊಡನೆ ಮಗಧ ದೇಶದ ರಾಜಧಾನಿಯಾದ ರಾಜಗೃಹಕ್ಕೆ ಬಂದನು. ಆ ದೇಶದ ರಾಜನಾದ ಬಿಂಬಸಾರನು



ಬುದ್ಧನ ಆಗಮನದ ಬಗ್ಗೆ ತಿಳಿಯುತ್ತಲೇ ತನ್ನ ಪರಿವಾರದೊಡನೆ ಬಂದು ಈ ಪುಣ್ಯ ಪುರುಷನನ್ನು ಸ್ವಾಗತಿಸಿ ವಂದಿಸಿದನು.

ಬುದ್ಧನು ಅವರನ್ನೆಲ್ಲಾ ಕರುಣೆಯಿಂದ ಮಾತನಾಡಿಸಿ ತನ್ನ 'ಧರ್ಮ'ದ ತತ್ವವನ್ನು ಬೋಧಿಸಿದನು. ರಾಜನು ತನ್ನ ಪರಿವಾರದೊಡನೆ ಬೌದ್ಧ ಮತವನ್ನು ಸ್ವೀಕರಿಸಿದನು. ರಾಜನು ಗುರುವಿನ ಉಪದೇಶದಿಂದ ತನಗಾದ ಅನುಗ್ರಹವನ್ನು ವ್ಯಕ್ತಪಡಿಸುತ್ತಾ "ಸ್ವಾಮಿ, ಇದೀಗ ತಮ್ಮಿಂದ ನನಗೆ ಪರಮಾನುಗ್ರಹವಾಯಿತು; ನನ್ನ ರಾಜ್ಯಕೋಶಕ್ಕಿಂತ ನಿಮ್ಮ ಉಪದೇಶದ ಬೆಲೆ ಅಪರಿಮಿತವಾದುದು" ಎಂದನು. "ಮಹಾಮುನಿಗಳೇ, ತಾವು ತಮ್ಮ ಶಿಷ್ಯ ಪರಿವಾರದೊಡನೆ ಬಂದು

ನಮ್ಮ ಅರಮನೆಯಲ್ಲಿ ಒಂದು ಹೊತ್ತಿನ ಭೋಜನವನ್ನು ಸ್ವೀಕರಿಸಬೇಕು" ಎಂದು ಪ್ರಾರ್ಥಿಸಿಕೊಂಡನು. ಬುದ್ಧನು ಸಂತೋಷದಿಂದ ಒಪ್ಪಿಕೊಂಡನು.

ಪರಿವಾರದ ಸಮೇತ ಬುದ್ಧನನ್ನು ಸ್ವಾಗತಿಸುವುದಕ್ಕೆ ರಾಜ ಬಿಂಬಸಾರನು ವಿಶೇಷ ಏರ್ಪಾಟುಗಳನ್ನು ಮಾಡಿಸಿದ್ದನು. ಅವರು ನಡೆದು ಬರುವ ರಸ್ತೆಯುದ್ದ ಕ್ಕೂ ಸುಖಾಗಮನದ ತೋರಣಗಳನ್ನು ಕಟ್ಟಿಸಿದ್ದನು. ಅರಮನೆಯ ಹೆಬ್ಬಾಗಿಲಿಗೆ ತಾನೇ ಬಂದು ಅತಿಥಿಗಳೆಲ್ಲರನ್ನೂ ಸ್ವಾಗತಿಸಿ ಅಂದವಾಗಿ ಸಜ್ಜುಗೊಳಿಸಿದ್ದ ವಿಶಾ ಲವಾದ ಆಸ್ಥಾನಕ್ಕೆ ಕರೆದೊಯ್ದು ಅಲಂಕೃತ ಪೀಠಗಳ ಮೇಲೆ ಕುಳ್ಳಿರಿಸಿದನು. ಬುದ್ಧನಿಗೆ ಸ್ವಲ್ಪ ಎತ್ತರವಾದ ವೇದಿಕೆಯ ಮೇಲೆ ಆಸನವನ್ನು ಏರ್ಪಡಿಸಿದ್ದನು.



ಬುದ್ಧನಿಗೆ ಉತ್ತಮ ಭೋಜನವನ್ನು ತನ್ನ ಕೈಯಿಂದಲೇ ಬಡಿಸಿದನು.

ಊಟವಾದ ಮೇಲೆ ರಾಜನು ಬುದ್ಧನಿಗೆ ಭಕ್ತಿಯಿಂದ ಕೈಮುಗಿದು "ಸ್ವಾಮಿ, ಗುರುಭಕ್ತಿಯ ಕುರುಹಾಗಿ ತಮ್ಮ ಉಪಯೋಗಕ್ಕಾಗಿ ಈ 'ವೇಲುವನ' ವೆಂಬ ತೋಟವನ್ನು ಬಳುವಳಿ ಕೊಟ್ಟಿದ್ದೇನೆ. ಈ ಅಲ್ಪ ಕಾಣಿಕೆಯನ್ನು ದಯವಿಟ್ಟು ಸ್ವೀಕರಿಸಬೇಕು" ಎಂದು ವಿನಂತಿಸಿಕೊಂಡನು.

ಬುದ್ಧನು ಈ ದಾನವನ್ನು ಸಂತೋಷದಿಂದಲೇ ಪಡೆದನು. ನಗರದ ಹೊರವಲಯದಲ್ಲಿದ್ದ ಈ ವೇಲುವನ ತೋಟದಲ್ಲಿ ಬೌದ್ಧ ಭಿಕ್ಕುಗಳ ವಾಸಕ್ಕಾಗಿ

ಮೊದಲನೆಯ 'ವಿಹಾರ' ವನ್ನು ಸ್ಥಾಪಿಸಿದನು. ಬೌದ್ಧ ಭಿಕ್ಕುಗಳ ಮಠವನ್ನು ವಿಹಾರವೆಂದು ಕರೆಯಲಾಗುತ್ತಿತ್ತು. ಈ ವಿಹಾರಗಳೇ ಮುಂದೆ ಬೌದ್ಧ ಸಂನ್ಯಾಸಿಗಳ ವಿದ್ಯಾರ್ಜನೆಯ ಮತ್ತು ಚಿಂತನೆಯ ಕೇಂದ್ರಗಳಾಗಿ ವ್ಯವಸ್ಥಿತಗೊಂಡವು.

ಆ ಕಾಲದಲ್ಲಿ ಯಾವುದೇ ಧರ್ಮಕ್ಕೆ ಸೇರಿದ ಸಂನ್ಯಾಸಿಗಳು ಮಳೆಗಾಲದ ಮೂರು ತಿಂಗಳುಗಳ ಕಾಲ ಅತ್ತಿತ್ತ ಅಲೆಯದೆ ಮಠದಲ್ಲೋ ದೇವಸ್ಥಾನದಲ್ಲೋ ವಾಸಮಾಡುವುದು ಸಂಪ್ರದಾಯವಾಗಿತ್ತು. ಅಂತೆಯೇ ಬೌದ್ಧ ಸಂನ್ಯಾಸಿಗಳು ಈ ಮೂರು ತಿಂಗಳುಗಳನ್ನು ವಿಹಾರಗಳಲ್ಲಿ ಕಳೆಯುತ್ತಿದ್ದರು.

ಶಾರಿಪುತ್ರ ಮತ್ತು ಮೊಗ್ಗಲ್ಲಣ್ಣರೆಂಬ ಇಬ್ಬರು ವಿಧ್ವಾಂಸರು ಬುದ್ಧನು ರಾಜಗೃಹದಲ್ಲಿ ಇರುವಾಗಲೇ ಬೌದ್ಧ ಧರ್ಮಕ್ಕೆ ಸೇರಿಕೊಂಡರು. ಸಂಘದ ಸಂನ್ಯಾಸಿಗಳ ಪೈಕಿ ಇವರಿಬ್ಬರೂ ಮುಂದೆ ಬಹಳ ಪ್ರಖ್ಯಾತರಾದರು. ಬೌದ್ಧ ಧರ್ಮಕ್ಕೆ ಸೇರುವ ಮೊದಲು ಇವರಿಬ್ಬರೂ ಒಂದು ಕಡೆ ನಿಲ್ಲದೆ ಅಲೆಯುವ ಸಂನ್ಯಾಸಿಗಳಾಗಿದ್ದರು. ಇವರಿಬ್ಬರೂ ಬಾಲ್ಯ ಸ್ನೇಹಿತರಾಗಿದ್ದು ಸತ್ಯವನ್ನು ಅರಿಯುವ ಉದ್ದೇಶದಿಂದ ಸಂಸಾರವನ್ನು ಬಿಟ್ಟು ವಿರಾಗಿಗಳಾಗಿದ್ದರು. ಸತ್ಯವನ್ನು ಯಾರು ಮೊದಲು ತಿಳಿದರೂ ಇನ್ನೊಬ್ಬನೊಡನೆ ಆ ರಹಸ್ಯವನ್ನು ಹಂಚಿಕೊಳ್ಳುವ ಬಗ್ಗೆ ತಮ್ಮ ತಮ್ಮಲ್ಲಿ ಒಪ್ಪಂದ ಮಾಡಿಕೊಂಡಿದ್ದರು .

ಒಂದು ದಿನ ಶಾರಿಪುತ್ರನು ಅಲೆಯುತ್ತಾ ನಡೆಯುತ್ತಿದ್ದಾಗ ಬುದ್ಧನ ಮೊದಲ ಐವರು ಶಿಷ್ಯರಲ್ಲಿ ಒಬ್ಬನಾದ 'ಅಸ್ಸಾಜಿ' ಎಂಬ ಭಿಕ್ಷು ಎದುರಾಗಿ ಬರುತ್ತಿದ್ದನು. "ಅಣ್ಣಾ, ನೀವು ಯಾವ ಧರ್ಮಕ್ಕೆ ಸೇರಿದವರು? ನಿಮ್ಮ ಗುರು ಯಾರು?" ಎಂದು ಅಸ್ಸಾಜಿಯನ್ನು ಕೇಳಿದನು.

"ನಾನು ಶಾಕ್ಯಮುನಿಯ ಪಂಗಡಕ್ಕೆ ಸೇರಿದವನು" ಎಂದು ಅಸ್ಸಾಜಿ ಉತ್ತರ ಕೊಟ್ಟನು.

"ಅವರ ಉಪದೇಶವೇನು? ತಿಳಿಸುವಿರಾ?" ಎಂದು ಕೇಳಲು ಅಸ್ಸಾಜಿಯು ಬುದ್ಧನ ಉಪದೇಶದ ಸಾರವಾದ 'ಧಮ್ಮ' ವನ್ನು ಶಾರಿಪುತ್ರನಿಗೆ ವಿವರಿಸಿದನು.

"ಆಹಾ! ಇದೇ ಸತ್ಯವನ್ನು ನಾನು ಇಲ್ಲಿಯವರೆವಿಗೆ ಹುಡುಕುತ್ತಾ ಅಲೆಯುತ್ತಿದ್ದನಲ್ಲಾ!" ಎಂದು ಶಾರಿಪುತ್ರನು ಉದ್ಗರಿಸಿದನು.

ಓಡಿ ಹೋಗಿ ತನ್ನ ಸ್ನೇಹಿತ ಮೊಗ್ಗಲ್ಲಣ್ಣನಿಗೆ ತಾನು ಕೇಳಿದ ಧಮ್ಮವನ್ನು ತಿಳಿಸಿದನು. ಆ ಕೂಡಲೇ ಇಬ್ಬರೂ ಬುದ್ಧನ ಬಳಿಗೆ ಬಂದು ನಮಸ್ಕರಿಸಲು ಬುದ್ಧನು ಸಂತೋಷದಿಂದ ಇಬ್ಬರನ್ನೂ ಸ್ವಾಗತಿಸಿ ತನ್ನ ಸಂಘಕ್ಕೆ ಸೇರಿಸಿಕೊಂಡನು.

# ಮನೆಗೆ ಆಗಮನ

ಬುದ್ಧನಿಗೆ ಜ್ಞಾನೋದಯವಾದ ಕೆಲವೇ ವರ್ಷಗಳಲ್ಲಿ ಅವನ ಮುದಿ ತಂದೆಯೂ ತನ್ನ ಮಗ ಪಡೆದ ಕೀರ್ತಿಯ ಬಗ್ಗೆ ವಿವರವಾಗಿ ಅರಿತನು. ಮಗನು ಸಂಸಾರವನ್ನು ತೊರೆದು ಹೊರಟು ಹೋದುದಕ್ಕೆ ಅವನು ಇನ್ನೂ ಕೊರಗುತ್ತಲೇ ಇದ್ದನು. ಆತನನ್ನು ಸ್ವಲ್ಪ ಕಾಲಕ್ಕೆ ಆದರೂ ಕಪಿಲವಸ್ತುವಿಗೆ ಕರೆಸಿ

ಕೊಳ್ಳಬೇಕೆಂದು ಆಸೆಪಟ್ಟನು. "ತನ್ನ ಒಬ್ಬನೇ ಮಗ ಮನೆಗೆ ಹಿಂತಿರುಗಿ ಬಂದು ಶಾಕ್ಯ ಪ್ರಜೆಗಳನ್ನು ಆಳುವ ಅರಸನಾಗಬಾರದೇ!" ಎಂದು ಇನ್ನೂ ಹಂಬಲಿಸುತ್ತಿದ್ದನು.

ಬುದ್ಧನು ರಾಜಗೃಹಕ್ಕೆ ಬಂದು ತನ್ನ ಧರ್ಮವನ್ನು ಬೋಧಿಸುತ್ತಿದ್ದಾನೆಂಬ ವಿಷಯ ತಿಳಿದಾಗ ತನ್ನ ಆಪ್ತ ಮಂತ್ರಿಯೊಬ್ಬನನ್ನು ಒಂದು ಸಾವಿರ ಸಂಗಡಿಗರೊಡನೆ ಕಳುಹಿಸುತ್ತಾ ತನ್ನ ಮಗನನ್ನು ಭೇಟಿ ಮಾಡಿ ಕಪಿಲವಸ್ತುವಿಗೆ ಕರೆತರಬೇಕೆಂದು ನಿಯಮಿಸಿದನು. ಬುದ್ಧನು ಒಂದು ದೊಡ್ಡ ಸಭೆಯಲ್ಲಿ ತನ್ನ ಧರ್ಮವನ್ನು ವಿವರಿಸುತ್ತಾ ಮನಮೋಹಕವಾಗಿ ಮಾತನಾಡುತ್ತಿದ್ದಾಗ ಈ ಮಂತ್ರಿ ತನ್ನ ಪರಿವಾರದೊಂದಿಗೆ ಬಂದು ಸೇರಿದನು. ಬುದ್ಧನ ಉಪದೇಶಕ್ಕೆ ಮಾರುಹೋಗಿ ಅಷ್ಟು ಜನರೂ ಬೌದ್ಧ ಧರ್ಮಾವಲಂಬಿಗಳಾದರು. ಎಲ್ಲರೂ ಸಂಸಾರವನ್ನು ತ್ಯಜಿಸಿ ಭಿಕ್ಕುಗಳಾದರು. ವೈರಾಗ್ಯದಿಂದ ವ್ಯವಹಾರವನ್ನು ಬಿಟ್ಟರು. ತಾವು ಅಲ್ಲಿಗೆ ಬಂದಿದ್ದ ಉದ್ದೇಶವನ್ನು ಮರೆತರು. ರಾಜನು ಹೇಳಿಕಳುಹಿಸಿದ್ದ ಆಹ್ವಾನವನ್ನು ಮುನಿಗೆ ತಿಳಿಸಲೇ ಇಲ್ಲ.

ಆ ನಂತರ ಶುದ್ಧೋದನ ರಾಜನು ಕಾಲುದಾಯಿ ಎಂಬ ಸಿದ್ಧಾರ್ಥನ ಬಾಲ್ಯ ಸ್ನೇಹಿತನನ್ನು ತನ್ನ ಮಗನನ್ನು ಕರೆತರುವಂತೆ ಹೇಳಿ ಕಳುಹಿಸಿದನು. ಅವನೂ ಸಹ ಬುದ್ಧ ಗುರುವಿನ ಉಪದೇಶದಿಂದ ಮರುಳಾಗಿ ಸಂಸಾರ ಬಿಟ್ಟು ಭಿಕ್ಕುವಾದನು. ಆದರೆ ರಾಜನ ಆಜ್ಞೆಯನ್ನು ಮರೆಯಲಿಲ್ಲ. ಬುದ್ಧನು ಒಂದು ದಿನ ವನದಲ್ಲಿ ವಿರಾಮವಾಗಿದ್ದಾಗ, "ಸ್ವಾಮಿ, ಮಹಾರಾಜರಾದ ನಿಮ್ಮ ತಂದೆಯೂ, ಪ್ರಜಾಪತಿ ಅತ್ತೆಯೂ, ಹೆಂಡತಿ ಯಶೋಧರೆಯೂ ನಿಮ್ಮನ್ನು ಕಾಣಲು ತುಂಬಾ ಉತ್ಸುಕರಾಗಿ ಇದ್ದಾರೆ; ಆದ್ದರಿಂದ ನಿಮ್ಮನ್ನು ಪ್ರಾರ್ಥಿಸಿ ಅರಮನೆಗೆ ಕರೆತರಬೇಕೆಂದೇ ನನ್ನನ್ನು ಮಹಾರಾಜರು ಕಳುಹಿಸಿದ್ದಾರೆ" ಎಂದು ವಿನಂತಿಸಿಕೊಂಡನು.

"ನಾನು ಕಪಿಲವಸ್ತುವಿಗೆ ಖಂಡಿತ ಹೋಗುತ್ತೇನೆ" ಎಂದು ಹೇಳಿ ಬುದ್ಧನು ಪ್ರಯಾಣ ಸಿದ್ಧತೆಯಲ್ಲಿ ತೊಡಗಿದನು. ಕಾಲುದಾಯಿ ಅವನಿಗಿಂತ ಮುಂಚೆ ಕಪಿಲವಸ್ತು ಸೇರಿ ಬುದ್ಧನು ಬರುವ ಸಮಾಚಾರವನ್ನು ತಿಳಿಸಿದನು.

ರಾಜಾ ಶುದ್ಧೋದನನು ತನ್ನ ಮಂತ್ರಿ ಮತ್ತು ಪರಿವಾರದೊಡನೆ ಪುತ್ರನನ್ನು ಎದುರುಗೊಳ್ಳಲು ಅರಮನೆಯಿಂದ ಹೊರಬಂದನು. ಬುದ್ಧನ ಗಾಂಭೀರ್ಯವನ್ನೂ, ತೇಜಸ್ಸನ್ನೂ ಕಂಡು ಬೆರಗಾದನು. ಮಗನನ್ನು ಕಣ್ಣು ತುಂಬಾ ನೋಡಿ "ಅಪ್ಪಾ ಮಗನೇ, ನೀನು ನಿಜವಾಗಿಯೂ ಮಾನವ ಜನಾಂಗವನ್ನೇ ಉದ್ಧರಿಸುವ ಧರ್ಮಮಾರ್ಗವನ್ನು ಕಂಡುಹಿಡಿದಿದ್ದೀ ಎಂಬುದರಲ್ಲಿ ಸಂಶಯವೇ ಇಲ್ಲ" ಎಂದು

ತನಗಾದ ಸಂತೋಷವನ್ನು ಹೇಳಿಕೊಂಡನು.

ಬುದ್ಧನೂ ಅವನ ಅನುಯಾಯಿಗಳೂ ಮನೆ-ಮಠ ಬಿಟ್ಟ ಭಿಕ್ಕುಗಳಾದ್ದರಿಂದ ಅರಮನೆಯಲ್ಲಿ ನಿಲ್ಲುವಂತಿರಲಿಲ್ಲ. ಆದ್ದರಿಂದ ರಾಜನು ಅವರ ವಾಸಕ್ಕೆ ಅರಮನೆಯಿಂದ ಅನತಿ ದೂರದಲ್ಲಿದ್ದ ನಿರೋಧವನದಲ್ಲಿ ಬಿಡಾರವನ್ನು ಏರ್ಪಡಿಸಿದನು.

ಬುದ್ಧನನ್ನು ವಂದಿಸಲು ಪೌರರು ಸಾಲಾಗಿ ವನಕ್ಕೆ ಬಂದರು. ಶಾಕ್ಯ ರಾಜ ಮನೆತನದ ಕೆಲವರು ಮೊದಲು ಬರಲಿಲ್ಲ. ಸಿದ್ಧಾರ್ಥನು ಅಲೆಯುವ ಸಂನ್ಯಾಸಿಯಾಗಿ ಮನೆತನಕ್ಕೆ ಅವಮಾನ ಮಾಡಿದ್ದಾನೆಂದು ಮಾತನಾಡಿಕೊಳ್ಳುತ್ತಿದ್ದರು. ಆದರೆ ಅವರು ಬುದ್ಧನ ಸಮೀಪಕ್ಕೆ ಬಂದು ಅವನ ಪ್ರವಚನ ಕೇಳಿದಾಗ ಅವರೆಲ್ಲರೂ ಅವನ ಜ್ಞಾನ ಮತ್ತು ತತ್ತ್ವೋಪದೇಶಕ್ಕೆ ಮರುಳಾಗಿ, ಮನಸೋತು ಅವನ ಮತಕ್ಕೆ ಸೇರಿಕೊಂಡರು.

ಮಾರನೇ ದಿನ ಬೆಳಿಗ್ಗೆ ನಿತ್ಯದ ಪದ್ಧತಿಯಂತೆ ಬುದ್ಧನೂ ತನ್ನ ಭಿಕ್ಷಾ ಪಾತ್ರೆಯನ್ನು ಹಿಡಿದು ರಸ್ತೆಯಲ್ಲಿ ಹೊರಟನು. ಶುದ್ಧೋದನನಿಗೆ ಈ ಸಮಾಚಾರ ತಿಳಿದಾಗ "ಅಯ್ಯೋ, ನನ್ನ ಮಗ ನನ್ನ ರಾಜಧಾನಿ ಕಪಿಲವಸ್ತುವಿನ ಬೀದಿಗಳಲ್ಲಿ ಭಿಕ್ಷೆ ಬೇಡುವನೇ?" ಎಂದು ಮರುಗಿದನು. ಮಗನು ಭಿಕ್ಷೆ ಬೇಡುವುದನ್ನು ತಡೆಯಲು ತಾನೇ ಮಗನಿದ್ದೆಡೆಗೆ ಬಂದನು. "ಇದು ನನ್ನ ಮತ್ತು ನನ್ನ ಜನತೆಯ ಘೋರ ಅಪಮಾನ. ನಿನ್ನ ಮತ್ತು ನಿನ್ನ ಭಿಕ್ಕುಗಳ ಪಾಲನೆ, ಪೋಷಣೆಗೆ ನೀನು ಕೇಳಿದಷ್ಟು ಹಣ ಕೊಡಬಲ್ಲೆ. ಭಿಕ್ಷೆ ಬೇಡಿ ನೀನು ನನ್ನ ಅವಮಾನ ಮಾಡಬೇಡ" ಎಂದನು.

"ಭಿಕ್ಷೆ ಬೇಡುವುದೇ ಭಿಕ್ಕುಗಳಾದ ನಮ್ಮ ಕರ್ತವ್ಯ" ಎಂದು ಗೌತಮ ಬುದ್ಧನು ರಾಜನಿಗೆ ಉತ್ತರಿಸಿದನು.

"ಇದು ಹೇಗೆ ಸಾಧ್ಯ? ನೀನು ಒಬ್ಬ ರಾಜಕುಮಾರ. ಒಂದು ರಾಜ್ಯದ ಉತ್ತರಾಧಿಕಾರಿ ಎಂಬುದು ನಿನಗೆ ಗೊತ್ತಿಲ್ಲವೇ?" ಎಂದು ನೊಂದ ಮಹಾರಾಜ ಕೇಳಿದನು.

"ಇಲ್ಲ. ನಾನು ಒಬ್ಬ ಭಿಕ್ಕು. ಭಿಕ್ಕುವಿಗೆ ಯಾವ ಸಾಂಸಾರಿಕ ವೈಭವವೂ ಇರುವುದಿಲ್ಲ" ಎಂದು ಬುದ್ಧನು ಶಾಂತವಾಗಿ ಹೇಳಿದನು.

ಮರುಮಾತನಾಡದೆ ರಾಜನು ಬುದ್ಧನನ್ನು ಅವನ ಪರಿವಾರದೊಡನೆ ತನ್ನ ಅರಮನೆಗೆ ಕರೆದುಕೊಂಡು ಹೋದನು. ರಾಜಪರಿವಾರದವರೆಲ್ಲರೂ ಹೊರಬಂದು

ಆದರದಿಂದ ಬರಮಾಡಿಕೊಂಡರು. ಬುದ್ಧನ ಅತ್ತೆ ಪ್ರಜಾಪತಿಯೂ ಇತರ ಹೆಂಗಸರೊಡನೆ ಬಂದಿದ್ದಳು. ಆದರೆ ಯಶೋಧರೆ ಮಾತ್ರ ಬರಲಿಲ್ಲ. "ನನ್ನಲ್ಲಿ ಏನಾದರೂ ಅವರ ವಿಶ್ವಾಸಕ್ಕೆ ಅರ್ಹತೆ ಇರುವ ಪಕ್ಷದಲ್ಲಿ ತಾನಾಗಿಯೇ ನನ್ನನ್ನು ಕಾಣಲು ಬರುತ್ತಾರೆ" ಎಂದು ಕೊಂಡು ರಾಣಿವಾಸದ ಕೋಣೆಯನ್ನು ಬಿಟ್ಟು ಹೊರಡಲಿಲ್ಲ.

ಶುದ್ಧೋದನನು ಬುದ್ಧನಿಗೆ "ನೀನು ಮನೆಬಿಟ್ಟು ಹೊರಟುಹೋದ ಏಳು ವರ್ಷಗಳಿಂದಲೂ ಯಶೋಧರೆಯು ವಿರಕ್ತಳೇ ಆಗಿದ್ದಾಳೆ. ಕಾವಿ ಬಟ್ಟೆಯನ್ನೇ ಉಡುತ್ತಿದ್ದಾಳೆ, ತಲೆಯ ಕೂದಲನ್ನೂ ಕಳೆದುಕೊಂಡಿದ್ದಾಳೆ, ಖಂಡಿತ ತಪಸ್ವಿನಿಯಂತೆಯೇ ಕಾಲ ಕಳೆಯುತ್ತಿದ್ದಾಳೆ" ಎಂದು ವಿವರಿಸಿದನು.

ಕೂಡಲೇ ಬುದ್ಧನು ಯಶೋಧರೆಯ ಕೋಣೆಗೆ ಹೋದನು. ಯಶೋಧರೆ ಅಳುತ್ತಾ ಬಂದು ಬುದ್ಧನ ಕಾಲಿಗೆ ಬಿದ್ದು ವಂದಿಸಿದಳು. ಅವಳ ಭಕ್ತಿಯನ್ನು ಮೆಚ್ಚಿ ಅವಳನ್ನು ಮನಸಾರೆ ಆಶೀರ್ವದಿಸಿದನು. ಆಗ ಬುದ್ಧನ ಮಗ ರಾಹುಲನಿಗೆ ಏಳು ವರ್ಷ ವಯಸ್ಸಾಗಿತ್ತು. ಆ ಹುಡುಗನಿಗೆ ತನ್ನ ತಂದೆಯ ಬಗ್ಗೆ ಏನೂ ತಿಳಿದಿರಲಿಲ್ಲ. ಶುದ್ಧೋದನನ್ನೇ ತಂದೆಯೆಂದು ನಂಬಿದ್ದನು. ಬುದ್ಧನು ಕಪಿಲವಸ್ತುವಿಗೆ ಬಂದು ಸೇರಿದ ಏಳನೆಯ ದಿನ ಯಶೋಧರೆಯು ರಾಹುಲನನ್ನು ರಾಜಕುಮಾರನಂತೆ ಸಿಂಗರಿಸಿ ಗೌತಮನ ಬಳಿ ಕಳುಹಿಸಿದಳು. ರಾಹುಲ ಮುಂದೆ ಏನಾಗಬೇಕು ಎಂಬ ನಿರ್ಣಯವಾಗಲಿ ಎಂಬುದು ಅವಳ ಇಚ್ಛೆಯಾಗಿತ್ತು.

ರಾಹುಲನು ಬುದ್ಧನ ಬಳಿ ಬಂದಾಗ ಬುದ್ಧನು ತನ್ನ ಮೆಚ್ಚಿನ ಶಿಷ್ಯ ಶಾರಿ ಪುತ್ರನನ್ನು ಕುರಿತು "ಈ ಬಾಲಕನನ್ನು ಸಂಘಕ್ಕೆ ಸೇರಿಸಿಕೋ" ಎಂದು ಅಪ್ಪಣೆ ಕೊಟ್ಟನು.

# ಲೋಕ ಗುರು

ಕೆಲವು ದಿನಗಳ ನಂತರ ತನ್ನ ಹೊಸ ಧರ್ಮವನ್ನು ಲೋಕಕ್ಕೆ ಪ್ರಚಾರ ಮಾಡಲು ಬುದ್ಧನು ಕಪಿಲವಸ್ತುವನ್ನು ಬಿಟ್ಟು ಮುಂದೆ ಹೊರಟನು. ಅವನು ನಿಂತ ಕಡೆಯೆಲ್ಲಾ ಅವನ ಧರ್ಮದ ಉಪದೇಶವನ್ನು ಕೇಳಿ ತಿಳಿಯಲು ಜನರು ಗುಂಪು-ಗುಂಪಾಗಿ ಸೇರುತ್ತಿದ್ದರು. ಅವರೆಲ್ಲರೂ ಬುದ್ಧನ ಪ್ರಭಾವಕ್ಕೆ ಒಳಗಾಗಿ ಬೌದ್ಧ ಧರ್ಮವನ್ನು ಸೇರಿದರು.

ಪ್ರಸೇನ ಜಿತನು ಕೋಸಲ ದೇಶದ ವೀರ ಮಹಾರಾಜನಾಗಿದ್ದನು.

ಅವನ ಧರ್ಮ ಪರಿವರ್ತನೆಯ ಕಥೆ ಬಹಳ ಸ್ವಾರಸ್ಯಕರವಾದುದು. ರಾಜನು ದೊಡ್ಡದೊಂದು ಪಶುಯಜ್ಞಕ್ಕೆ ಏರ್ಪಾಟು ಮಾಡಿದ್ದನು. ಆ ಸಮಯಕ್ಕೆ ಯಜ್ಞಶಾಲೆಗೆ ಬುದ್ಧನೇ ಸ್ವತಃ ಬಂದು ನಿಂತು ಪಶುಗಳನ್ನು ಬಲಿ ಕೊಡಬಾರದೆಂದು ವಾದ ಹೂಡಿದನು. ವಿದ್ವಾಂಸರು ಮೂಕರಾದರು. ರಾಜಾ ಪ್ರಸೇನಜಿತನು ಅವನ ವಾದಸರಣಿಯಿಂದ ಪ್ರಭಾವಿತನಾಗಿ ಎಲ್ಲಾ ಪಶುಗಳನ್ನೂ ಬಿಡುಗಡೆ ಮಾಡಿ ಬೌದ್ಧ ಧರ್ಮದ ದೀಕ್ಷೆ ಪಡೆದನು.

ಧರ್ಮ ಭ್ರಷ್ಟನಾಗಿದ್ದ ಅಂಗುಲಿಮಾಲನೆಂಬ ಕ್ರೂರಿಯೊಬ್ಬನು ತಾನು ಕೊಂದ ಮನುಷ್ಯರ ಬೆರಳನ್ನು ಪೋಣಿಸಿ ಸರಮಾಡಿ ಕುತ್ತಿಗೆಗೆ ಹಾಕಿಕೊಳ್ಳುತ್ತಿದ್ದನು! ಈ ಹಿಂಸಾ ಮೃಗನಾಗಿದ್ದ ದರೋಡೆ ಕೋರನೊಡನೆ ಕರುಣಾಮೂರ್ತಿಯಾದ ಬುದ್ಧನು ಒಂಟಿಯಾಗಿ ಯಾವ ಆಯುಧವೂ ಇಲ್ಲದೆ ಹೋಗಿ ಕಂಡು ಅವನಿಗೂ ಅಹಿಂಸಾ ಧರ್ಮವನ್ನು ಉಪದೇಶಿಸಿದನು. ಆ ಕ್ರೂರಿಯೂ ಬುದ್ಧನ ಧೈರ್ಯವನ್ನು ಕಂಡು ಪ್ರಭಾವಿತನಾಗಿ ಅವನ ಅಹಿಂಸಾ ಧರ್ಮವನ್ನು ಮನಸಾರೆ ಒಪ್ಪಿಕೊಂಡು ಬೌದ್ಧ ಧರ್ಮಿಯಾದನು. ಮುಂದೆ ಇವನು ಸಂಘದ ಪ್ರಮುಖ ಸದಸ್ಯರಲ್ಲಿ ಒಬ್ಬನಾದನು.

ವಿಶಾಖೆ ಎಂಬುವಳು ಮತಾಂತರ ಹೊಂದಿದ ಮಹಿಳೆಯರಲ್ಲಿ ಪ್ರಖ್ಯಾತಳು. ಕೋಸಲ ದೇಶದ ರಾಜಧಾನಿಯಾದ ಶ್ರಾವಸ್ತಿಯಲ್ಲಿ ವಾಸಿಸುತ್ತಿದ್ದ ಧನಂಜಯನೆಂಬ ದೊಡ್ಡ ಮನುಷ್ಯನ ಮಗಳು. ಈಕೆ ಸಣ್ಣ ವಯಸ್ಸಿನಲ್ಲಿಯೇ ತನ್ನ ತಂದೆಯ ಕುಟುಂಬ ಸಮೇತ ಬೌದ್ಧ ಧರ್ಮಕ್ಕೆ ಸೇರಿದ್ದವಳು. ಕಾಲಾನಂತರ ಅದೇ ಶ್ರಾವಸ್ತಿಯ ಮಿಗಾರನೆಂಬ ಸಾಹುಕಾರನ ಮಗನಾದ ಪೂರ್ಣವರ್ಧನ ಎಂಬುವನೊಡನೆ ಅವಳ ವಿವಾಹವಾಯಿತು.

ಮಿಗಾರನು ಬೌದ್ಧ ಧರ್ಮಕ್ಕೆ ಸೇರಿರಲಿಲ್ಲ. ಅವನು ಜೈನನಾಗಿದ್ದು ಬುದ್ಧನ ಧರ್ಮ ಮತ್ತು ಉಪದೇಶವನ್ನು ಅಲಕ್ಷ್ಯದಿಂದ ಕಾಣುತ್ತಿದ್ದನು.

ಜೈನ ಧರ್ಮದ ಅನುಯಾಯಿಯಾದ ಮಿಗಾರ ಬುದ್ಧ ಮತ್ತು ಅವನ ಧರ್ಮವನ್ನು ವಿರೋಧಿಸುತ್ತಿದ್ದನು. ಬುದ್ಧನು ಶ್ರಾವಸ್ತಿಗೆ ಬರುವ ಸೂಚನೆ ದೊರೆತ ಕೂಡಲೇ ವಿಶಾಖ ಹೇಳಿದಳು : "ಗೌತಮ ಬುದ್ಧರು ಶ್ರಾವಸ್ತಿಗೆ ಬರುತ್ತಾರೆ ಎಂದು ತಿಳಿಯಿತು".

"ಆದರೆ ಏನಾಯಿತು?" ಎಂದು ಮಿಗಾರನು ಕೇಳಿದನು.

"ಅನೇಕ ಯುವಕರನ್ನು ಭಿಕ್ಕುಗಳನ್ನಾಗಿ ಮಾಡಿ ಅವರ ಜೀವನ ಹಾಳು

ಮಾಡಿರುವುದು ನಿನಗೆ ತಿಳಿಯದೇ? ನಮ್ಮ ತುಂಬಿದ ಈ ಸಂಸಾರವೂ ಹಾಳಾಗಬೇಕು ಎನ್ನುವುದು ನಿನ್ನ ಇಷ್ಟವೇ?" ಎಂದು ಅವಳನ್ನು ಕೇಳಿದನು.

"ಗುರುವಿನ ಬಗ್ಗೆ ಈ ರೀತಿ ಕೆಟ್ಟ ಅಭಿಪ್ರಾಯವನ್ನು ಅವರ ಶತ್ರುಗಳಷ್ಟೇ ಹರಡುತ್ತಿದ್ದಾರೆ! ಅವರು ಬರುವಾಗ ಕುಟುಂಬಕ್ಕೆ ಸುಖ-ಶಾಂತಿಗಳನ್ನೇ ತಂದು ನೀಡಬಲ್ಲರೆಂದು ನಾನು ಬಲ್ಲೆ" ಎಂದು ವಿಶಾಖೆ ಸಮಾಧಾನದಿಂದ ವಾದಿಸಿದಳು.

"ಅಪ್ಪಾ, ಆತನು ಮನೆಗೆ ಬಂದರೆ ತಪ್ಪೇನು? ಧರ್ಮ ಮಾರ್ಗದಲ್ಲಿರುವ ಒಬ್ಬ ಸಂನ್ಯಾಸಿಗೆ ತೋರಿಸುವ ಸಾಮಾನ್ಯ ಮರ್ಯಾದೆಯನ್ನು ಅವನಿಗೂ ಮಾಡಿದರಾಯಿತು" ಎಂದು ಅವಳ ಗಂಡ ಹೆಂಡತಿಯ ಮಾತನ್ನೇ ಪುಷ್ಟೀಕರಿಸಿದನು.

ಕಡೆಗೆ ಮಿಗಾರನು ಒಪ್ಪಿಕೊಂಡನು. ವಿಶಾಖೆ ಹೋಗಿ ಬುದ್ಧನನ್ನು ಮನೆಗೆ ಭಿಕ್ಷೆಗೆ ಬರಬೇಕೆಂದು ಕೇಳಿಕೊಂಡಳು. ಬುದ್ಧನ ಅಮೃತವಾಣಿ ತನ್ನ ಮಾವನನ್ನು ಖಂಡಿತಾ ಸನ್ಮಾರ್ಗಕ್ಕೆ ಪ್ರೇರೇಪಿಸಬಲ್ಲದೆಂದು ಆಕೆ ಮನಸಾರೆ ನಂಬಿದ್ದಳು. ಹಾಗೆಯೇ ಬುದ್ಧನ ನೀತಿ ವಾಕ್ಯಗಳೂ ತನ್ನ ಕುಟುಂಬದವರೆಲ್ಲರಿಗೂ, ತನ್ನ ಮಾವನಿಗೂ ಸಹ ಕಿವಿಗೆ ಬೀಳುವಂತೆ ಏರ್ಪಾಟು ಮಾಡಿದಳು.

ಆಕೆಯ ನಂಬಿಕೆ ಫಲಿಸಿತು. ಕರುಣಾಮೂರ್ತಿಯಾದ ಬುದ್ಧನ ವಾದಸರಣಿಯು ಮಿಗಾರನ ಮೇಲೆ ಪ್ರಭಾವ ಬೀರದೇ ಬಿಡಲಿಲ್ಲ. ಸರಿ, ಆತನೂ ಬೌದ್ಧ ಧರ್ಮವನ್ನೇ ಒಪ್ಪಿಕೊಂಡನು.

ಬುದ್ಧನು ಶ್ರಾವಸ್ತಿಯಲ್ಲಿದ್ದಷ್ಟು ದಿನವೂ ಆತನ ಉಪದೇಶವಾಣಿಯನ್ನು ವಿಶಾಖ ಸಭೆಗಳಿಗೆ ಹೋಗಿ ಕೇಳುತ್ತಿದ್ದಳು. ಒಮ್ಮೆ ಬುದ್ಧನ ಉಪದೇಶ ಸಭೆಯನ್ನು ಪ್ರವೇಶಿಸುವಾಗ ವಿಶಾಖೆಯು ತನ್ನ ತಲೆಯನ್ನಲಂಕರಿಸಿದ್ದ ರತ್ನಖಚಿತ ಕಿರೀಟವನ್ನು ಒಂದು ಕಡೆ ತೆಗೆದಿಟ್ಟಳು. ಸಭೆ ಮುಗಿದ ಕೂಡಲೇ ಕಿರೀಟವನ್ನು ಅಲ್ಲೇ ಮರೆತು ಮನೆಗೆ ಮರಳಿದಳು.

ಜನರೆಲ್ಲರೂ ಹೊರಟುಹೋದ ಮೇಲೆ ಬುದ್ಧನ ಶಿಷ್ಯನಾದ ಭಿಕ್ಕು ಆನಂದನು ಈ ಕಿರೀಟವನ್ನು ಕಂಡನು. ಅದು ವಿಶಾಖೆಯದೇ ಎಂದು ಊಹಿಸಿ, ಒಬ್ಬ ಸೇವಕನ ಮೂಲಕ ಅದನ್ನು ಅವಳ ಮನೆಗೆ ಕೊಟ್ಟು ಕಳುಹಿಸಿದನು.

ಆದರೆ ವಿಶಾಖೆ ಅದನ್ನು ತೆಗೆದುಕೊಳ್ಳಲಿಲ್ಲ. ಬದಲಾಗಿ ಅದನ್ನು ಸಂಘಕ್ಕೆ ದಾನವಾಗಿ ಕೊಟ್ಟಳು.

ಆ ಬೆಲೆಬಾಳುವ ಕಿರೀಟವನ್ನು ಕೊಳ್ಳುವಂತಹ ದೊಡ್ಡ ಸಾಹುಕಾರ ಇನ್ನೂ ಶ್ರಾವಸ್ತಿಯಲ್ಲಿಯೇ ಇರಲಿಲ್ಲ. ಹೀಗಾಗಿ ವಿಶಾಖೆಯೇ ಹಣಕೊಟ್ಟು ತನ್ನ ಕಿರೀಟವನ್ನು ಕೊಂಡುಕೊಂಡಳು. ಆ ಹಣದಿಂದ ಬುದ್ಧ ಗುರು ಮತ್ತು ಅವನ ಪರಿವಾರದವರ ಉಪಯೋಗಕ್ಕೆಂದು ಒಂದು ವಿಹಾರವನ್ನು ಕಟ್ಟಿಸಿಕೊಟ್ಟಳು. ಅದನ್ನು ಮೂಡಣ ಉದ್ಯಾನವೆಂದು ಕರೆಯಲಾಯಿತು. ಶ್ರಾವಸ್ತಿಗೆ ಬಂದಾಗಲೆಲ್ಲಾ ಬುದ್ಧನು ತನ್ನ ಈ ಮೆಚ್ಚಿನ ವಿಹಾರದಲ್ಲೇ ತಂಗುತ್ತಿದ್ದನು.

ಅನಂತ ಪಿಂಡಿಕನೆಂಬ ಒಬ್ಬ ಧನಾಢ್ಯ ವ್ಯಾಪಾರಿ ಶ್ರಾವಸ್ತಿಯಲ್ಲಿ ವಾಸಿಸುತ್ತಿದ್ದನು. ಅವನ ನಿಜವಾದ ಹೆಸರು ಸುದತ್ತನೆಂದೇ ಇದ್ದರೂ ಅನಾಥರಿಗೆಲ್ಲಾ ಅವರವರ ಇಷ್ಟಾರ್ಥ ಈಡೇರುವಂತೆ ಮಿತಿಯಿಲ್ಲದೆ ದಾನ ಮಾಡುವುದರಲ್ಲೇ ನಿರತನಾಗಿದ್ದುದರಿಂದ ಅವನನ್ನು ಅನಂತಪಿಂಡಿಕನೆಂದೇ ಜನ ಕರೆಯುತ್ತಿದ್ದರು.

ಒಮ್ಮೆ ಯಾವುದೋ ವ್ಯವಹಾರಕ್ಕೆಂದು ಆತನು ರಾಜಗೃಹಕ್ಕೆ ಹೋದಾಗ ತನ್ನ ಸಹೋದರಿಯ ಮನೆಯಲ್ಲಿ ಒಂದು ರಾತ್ರಿ ತಂಗಲು ಬಂದನು. ಆಗ ಅವನ ಭಾವ ಯಾರೋ ದೊಡ್ಡ ಮನುಷ್ಯರನ್ನು ಸ್ವಾಗತಿಸಲು ಸಡಗರದಿಂದ ವಿಶೇಷ ಏರ್ಪಾಟುಗಳನ್ನು ನಡೆಸುತ್ತಿರುವುದನ್ನು ಗಮನಿಸಿದನು. ಮಗಧ ರಾಜನಾದ ಬಿಂಬಸಾರನೇ ಬರುತ್ತಿರಬಹುದೆಂದು ಅನಂತಪಿಂಡಿಕನು ಊಹಿಸಿದನು.

ಭಾವನನ್ನು ಕೇಳಿದಾಗ ಅವನು "ಭಗವಾನ್ ಬುದ್ಧನು ತನ್ನ ಪರಿವಾರದೊಡನೆ ಬರುತ್ತಿರುವನು" ಎಂದು ಹೇಳಿದನು.

"ಈಗ ಅವರೆಲ್ಲಿದ್ದಾರೆ?" ಎಂದು ಕುತೂಹಲದಿಂದ ಅನಂತಪಿಂಡಿಕನು ಕೇಳಿದನು. ಬುದ್ಧನ ಹೆಸರು ಕೇಳುತ್ತಿದ್ದಂತೆ ಅವನನ್ನು ನೋಡುವ ಆಸೆಯಾಯಿತು ಅವನಿಗೆ.

"ಸಧ್ಯದಲ್ಲಿ ಅವರು ಸೀತಾವನದಲ್ಲಿದ್ದಾರೆ" ಎಂದು ಊರಿಂದ ಅನತಿ ದೂರದಲ್ಲಿದ್ದ ಉದ್ಯಾನದ ಕಡೆ ಕೈತೋರಿಸಿ ತಿಳಿಸಿದನು.

ಆ ಕೂಡಲೇ ಹೋಗಿ ಬುದ್ಧದೇವನ ದರ್ಶನ ಪಡೆಯಬೇಕೆಂದು ಆತನಿಗೆ ಮನಸ್ಸಾಯಿತು. ಅವನ ಭಾವ "ಈಗ ಅತಿ ರಾತ್ರಿಯಾಗಿದೆ, ಬೆಳಗಿನ ಝಾವಕ್ಕೆ ಹೊರಡಬಹುದು" ಎಂದು ಆತನನ್ನು ತಡೆದನು.

ಅನಂತಪಿಂಡಿಕನಿಗೆ ರಾತ್ರಿ ನಿದ್ದೆ ಎಲ್ಲಿಂದ ಬಂದೀತು? ಮೂರು-ನಾಲ್ಕು ಸಾರಿ ಎದ್ದು ಸಮಯ ತಿಳಿಯಲು ನಕ್ಷತ್ರಗಳ ಕಡೆ ನೋಡಿದನು. ಕಡೆಗೆ ಬೆಳಗಿನ

ಘೂಾವಕೆ ¸ ಅತಿ ಮುಂಚೆಯೇ ಸೀತಾವನಕ್ಕೆ ಹೊರಟು ಬಂದನು. ಬುದ್ಧ ದೇವನು ಏಳುವ ಮುಂಚೆಯೇ ಅವನು ಸೀತಾವನದಲ್ಲಿದ್ದನು.

ಬುದ್ಧನು ಅವನನ್ನು ಅತಿ ಕರುಣೆಯಿಂದ ಕಂಡು ಆದರದಿಂದ ಧರ್ಮದ ಸಾರವನ್ನು ಉಪದೇಶಿಸಿದನು. ಅನಂತಪಿಂಡಿಕನು ಬುದ್ಧನ ಪ್ರತ್ಯಕ್ಷ ಜ್ಞಾನಬೋಧೆ ಯಿಂದ ಪ್ರಭಾವಿತನಾಗಿ ಆ ಕೂಡಲೇ ಭಿಕ್ಕುವಾಗಲು ಅನುವಾದನು. "ನನ್ನ ಐಶ್ವರ್ಯವನ್ನೆಲ್ಲಾ ತ್ಯಾಗ ಮಾಡಿ ಈಗಲೇ ತಮ್ಮ ಸಂಘಕ್ಕೆ ಭಿಕ್ಕುವಾಗಿ ಸೇರಲು ಸಿದ್ಧನಾಗಿದ್ದೇನೆ" ಎಂದು ವಿನಂತಿಸಿಕೊಂಡನು.

"ಐಶ್ವರ್ಯವಂತನಾಗಿರುವುದರಲ್ಲಿ ತಪ್ಪೇನೂ ಇಲ್ಲವಲ್ಲ! ಐಶ್ವರ್ಯಕ್ಕೇ ಅತಿಯಾಗಿ ಅಂಟಿಕೊಳ್ಳುವುದು ತಪ್ಪು. ಅಲ್ಲದೆ, ನಿನ್ನಲ್ಲಿರುವ ಹಣವನ್ನು ಸಮಾಜದ ಒಳಿತಿಗೋಸ್ಕರ ವಿನಿಯೋಗಿಸಲು ಹಿಂತೆಗೆಯಬಾರದು, ಅಷ್ಟೇ" ಎಂದು ಬುದ್ಧನು ಹೇಳಿದನು.

"ನಾನು ದಾನ ಮಾಡುತ್ತಲೇ ಇದ್ದೇನೆ. ಅನೇಕ ಜನರ ಜೀವನ ಮತ್ತು ಸಂಸ್ಥೆಗಳು ನನ್ನ ದಾನವನ್ನೇ ಅವಲಂಬಿಸಿವೆ" ಎಂದು ಅನಂತ ಪಿಂಡಿಕನು ನಮ್ರತೆ ಯಿಂದ ಹೇಳಿದನು.

"ಹಾಗಿರುವಾಗ ನೀನು ಲೋಕ ವ್ಯವಹಾರವನ್ನು ಬಿಟ್ಟು ಅಷ್ಟು ಜನ ಆಶ್ರಿತರನ್ನು ರಕ್ಷಿಸದೆ ಅವರನ್ನು ಹಸಿವಿನತ್ತ ತಳ್ಳುವುದು ನ್ಯಾಯವೇ? ಧರ್ಮಮಾರ್ಗವನ್ನು ಅನುಸರಿಸಲು ಲೋಕ ವ್ಯವಹಾರವನ್ನೆಲ್ಲಾ ಬಿಡಬೇಕೆಂಬ ಅವಶ್ಯಕತೆಯಿಲ್ಲ; ನೀನು ಸಾಧುವಾದ, ಉತ್ತಮ ರೀತಿಯ ಜೀವನವನ್ನು ನಡೆಸುತ್ತಿರುವಾಗ ಅದನ್ನು ತ್ಯಜಿಸುವುದೂ ತರವಲ್ಲ" ಎಂದು ಉಪದೇಶಿಸಿದನು.

ಶಾಕ್ಯಮುನಿಯ ಬುದ್ಧಿವಾದವನ್ನು ಕೇಳಿ ಅನಂತಪಿಂಡಿಕನು ಸಹಜವಾಗಿ ಸಂತೋಷಗೊಂಡನು. ಮಳೆಗಾಲದಲ್ಲಿ ಭಿಕ್ಕುಗಳ ಏಕಾಂತ ವಾಸಕ್ಕಾಗಿ ಶ್ರಾವಸ್ತಿಯಲ್ಲಿ ಒಂದು ಮಠವನ್ನು ಕಟ್ಟಿಸಿಕೊಡುವುದಾಗಿ ಕೋರಿಕೊಂಡನು. ಬುದ್ಧನು ಒಪ್ಪಿಕೊಂಡನು.

ವಿಹಾರಕ್ಕೆ ಉತ್ತಮ ನಿವೇಶನವನ್ನು ಆಯ್ಕೆ ಮಾಡಲು ಬುದ್ಧನ ಪ್ರಮುಖ ಶಿಷ್ಯನಾದ ಶಾರಿಪುತ್ರನನ್ನು ಜೊತೆಗೆ ಕರೆದುಕೊಂಡು ಹೊರಟನು. ನಗರದ ಹೊರ ವಲಯದಲ್ಲೇ ಧ್ಯಾನ ಮತ್ತು ತಪಸ್ಸಿಗೆ ಉತ್ಕೃಷ್ಟವಾದ ಹಾಗೂ ಶಾಂತವಾಗಿದ್ದ ನಿವೇಶನವೊಂದನ್ನು ಇಬ್ಬರೂ ಸೇರಿ ಆಯ್ಕೆ ಮಾಡಿದರು. ಆದರೆ ಈ ನಿವೇಶನವು

ರಾಜಕುಮಾರನಾದ ಜೇತನಿಗೆ ಸೇರಿತ್ತು. ಆತನು ಅದನ್ನು ಮಾರಲು ಒಪ್ಪಲಿಲ್ಲ.

ಅನಂತಪಿಂಡಿಕನು ಕೊಳ್ಳುವ ಹಠ ಹಿಡಿದನು. ಆಗ ರಾಜಕುಮಾರನು ಹೇಳಿದನು: "ಸರಿ, ಹಾಗಾದರೆ ನೀನು ಚಿನ್ನದ ನಾಣ್ಯಗಳಿಂದ ಎಷ್ಟು ಜಾಗವನ್ನು ಮುಚ್ಚಬಲ್ಲೆಯೋ ಅಷ್ಟು ನಿನ್ನದಾಗುತ್ತದೆ".

ಕೂಡಲೇ ಅನಂತ ಪಿಂಡಿಕನು ದೊಡ್ಡ ದೊಡ್ಡ ಪೆಟಾರಿಯ ತುಂಬಾ ಚಿನ್ನದ ನಾಣ್ಯಗಳನ್ನು ತರಿಸಿ ಆ ಭೂಮಿಯನ್ನು ನಾಣ್ಯಗಳಿಂದ ಮುಚ್ಚಲು ತೊಡಗಿದನು. ಆದರೆ ಅಷ್ಟು ದೊಡ್ಡ ಜಾಗವನ್ನು ಚಿನ್ನದ ನಾಣ್ಯಗಳಿಂದ ಮುಚ್ಚಲು ಯಾರಿಗೆ ತಾನೆ ಸಾಧ್ಯ?

ರಾಜಕುಮಾರನು ಹೇಳಿದನು: "ನಾನು ಈ ಜಮೀನನ್ನು ಮಾರುವುದಿಲ್ಲ ಎಂದು ನಿನಗೆ ಮೊದಲೇ ಹೇಳಿದ್ದೆ. ಇನ್ನು ನಾಣ್ಯಗಳಿಂದ ಮುಚ್ಚುವ ಮಾತು ಕೇವಲ ತಮಾಷೆಯಷ್ಟೇ."

ಈ ವಿಷಯ ವಾಗ್ವಾದಕ್ಕೆ ಎಡೆಕೊಟ್ಟುದುದರಿಂದ ಇಬ್ಬರೂ ಒಬ್ಬ ನ್ಯಾಯಾಧೀಶನಲ್ಲಿಗೆ ಹೋಗಬೇಕಾಯಿತು. ನ್ಯಾಯಾಧೀಶನು "ಒಬ್ಬನು ತಮಾಷೆಗಾಗಿ ಹಾರಿಕೆಯ ಮಾತನ್ನೇ ಆಡಿರಬಹುದಾದರೂ ಇನ್ನೊಬ್ಬ ಕೊಳ್ಳುವ ವ್ಯಕ್ತಿ ಸವಾಲನ್ನು ಒಪ್ಪಿದುದರಿಂದ ವ್ಯಾಪಾರದ ಕರಾರು ಮುಗಿದಂತೆಯೇ ಸರಿ" ಎಂದು ತೀರ್ಮಾನಿಸಿದನು.

ಹೀಗಾಗಿ ಜೇತನು ಆ ನಿವೇಶನವನ್ನು ವಿಧಿಯಿಲ್ಲದೆ ಬಿಟ್ಟುಕೊಡಬೇಕಾಗಿ ಬಂದಿತು. ಆದರೆ ಬೌದ್ಧಭಿಕ್ಷುಕರಿಗಾಗಿ ವಿಹಾರವನ್ನು ಕಟ್ಟಲಿಕ್ಕಾಗಿಯೇ ಈ ನಿವೇಶನವನ್ನು ಕೊಂಡನೆಂಬ ವಿಷಯ ತಿಳಿದಾಗ ರಾಜಕುಮಾರನು ಸಂತೋಷಪಟ್ಟು ತಾನೂ ಇಷ್ಟು ವಂತಿಗೆ ಕೊಡಬೇಕೆಂದು ನಿರ್ಧರಿಸಿದನು. ಆ ಚಿನ್ನದ ನಾಣ್ಯದಲ್ಲಿ ಅರ್ಧ ಭಾಗ ಮಾತ್ರ ತೆಗೆದುಕೊಂಡು "ನಿಮ್ಮ ಭಾಗಕ್ಕೆ ಭೂಮಿ ಇಟ್ಟುಕೊಳ್ಳಿರಿ; ನನ್ನ ಭಾಗಕ್ಕೆ ನಿಂತಿರುವ ಮರಗಳು ಇರಲಿ; ನನ್ನ ಭಾಗವನ್ನು ನಾನೇ ಗುರುದೇವನಿಗೆ ಅರ್ಪಿಸುತ್ತೇನೆ" ಎಂದು ವಿನಯದಿಂದ ನುಡಿದನು.

ಜೇತವನ ವಿಹಾರವು ಬುದ್ಧನಿಗೆ ಅತಿ ಪ್ರಿಯವಾದ ವಿಹಾರಗಳಲ್ಲಿ ಒಂದಾಯಿತು. ಬುದ್ಧದೇವನು ಈ ವಿಹಾರದಲ್ಲಿ ಹೆಚ್ಚಿನ ಮಹತ್ವವಾದ ನೀತಿಬೋಧೆಯನ್ನು ಜನರಿಗೆ ನೀಡಿದನು. ರಾಜಾ ಪ್ರಸೇನಜಿತನು ತನ್ನ ಪರಿವಾರದೊಡನೆ ಅನೇಕ ಬಾರಿ ಇಲ್ಲಿಗೆ ಬಂದು ಧರ್ಮಗುರುವನ್ನು ವಂದಿಸಿ ಸತ್ಕರಿಸಿದ್ದನು. ಬುದ್ಧನೂ ಸಹ ರಾಜನಿಗೆ

ಅನೇಕ ವಿಷಯಗಳ ಬಗ್ಗೆ ಸಲಹೆ ನೀಡಿದ್ದನು. ರಾಜಧರ್ಮವನ್ನು ವಿವರಿಸುತ್ತಾ "ತನ್ನ ಒಬ್ಬನೇ ಮಗನನ್ನು ತಂದೆ ಹೇಗೆ ಕಾಣುತ್ತಾನೆಯೋ ಅಂತೆಯೇ ರಾಜನು ಪ್ರತಿ ಪ್ರಜೆಯನ್ನು ನೋಡಿಕೊಳ್ಳಬೇಕು. ಅವರಿಗೆ ಹಿಂಸೆಯಾಗಬಾರದು. ಜನರು ಧರ್ಮ ಮಾರ್ಗದಲ್ಲಿಯೇ ನಡೆದುಕೊಳ್ಳುವ ಹಾಗೆ ಸಹಕರಿಸಬೇಕು. ಕಷ್ಟದಲ್ಲಿ ಇರುವವರನ್ನೂ, ಬಡವರನ್ನೂ ಸಂತೈಸಿ ಅವರಿಗೆ ಸೌಕರ್ಯಗಳನ್ನು ಒದಗಿಸಿ ಕೊಡಬೇಕು" ಎಂದು ರಾಜನ ಕರ್ತವ್ಯವನ್ನು ತಿಳಿಸಿಕೊಟ್ಟನು.

ಒಮ್ಮೆ ತನ್ನ ಮೆಚ್ಚಿನ ಶಿಷ್ಯ ಆನಂದನೊಡನೆ ಬುದ್ಧ ಗುರು ಇಲ್ಲೇ ತಂಗಿದ್ದನು. ಪ್ರತಿ ದಿವಸ ಅಭ್ಯಾಸದಂತೆ ಆನಂದನು ಅರುಣೋದಯಕ್ಕೆ ಎದ್ದು ತನ್ನ ಭಿಕ್ಷಾ ಪಾತ್ರೆಯನ್ನು ಹಿಡಿದು ನಗರದ ರಸ್ತೆಯಲ್ಲಿ ಭಿಕ್ಷೆಗಾಗಿ ಹೊರಟಿದ್ದನು. ವಿಹಾರಕ್ಕೆ ಹಿಂತಿರುಗುತ್ತಿದ್ದ ದಾರಿಯಲ್ಲಿ ಅವನಿಗೆ ಬಾಯಾರಿಕೆಯಾಯಿತು. ಪಕ್ಕದಲ್ಲೇ ಇದ್ದ ಭಾವಿಯ ಹತ್ತಿರ ಬಂದಾಗ ಹೀನ ಜಾತಿಗೆ ಸೇರಿದ ಹುಡುಗಿಯೊಬ್ಬಳು ನೀರು ಸೇದುತ್ತಿದ್ದುದನ್ನು ಕಂಡನು.

"ತಂಗೀ, ನನಗೆ ಬಾಯಾರಿಕೆಯಾಗಿದೆ. ಕುಡಿಯಲು ಸ್ವಲ್ಪ ನೀರು ಕೊಡುತ್ತೀಯಾ?" ಎಂದು ಕೇಳಿದನು.

"ನೀವು ನನ್ನ ಕೈಯಿಂದ ನೀರು ಕುಡಿಯುವುದು ಹೇಗೆ ಸಾಧ್ಯ? ನಾನು ಒಬ್ಬ ಚಾಂಡಾಲ ಕನ್ಯೆ. ಹೀನ ಜಾತಿಯವಳು ಎಂಬುದು ನಿಮಗೆ ತಿಳಿಯದೆ?" ಎಂದು ಹುಡುಗಿ ಕೇಳಿದಳು.

"ತಂಗೀ, ನಿನ್ನ ವಂಶವನ್ನಾಗಲೀ, ಕುಲವನ್ನಾಗಲೀ ನಾನು ಕೇಳಲಿಲ್ಲ. ನನಗೆ ಅದು ಬೇಕಾಗಿಲ್ಲ. ನನಗೆ ಬಾಯಾರಿಕೆ ಆಗಿದೆ. ನೀನು ಯಾರೇ ಆಗಿರಲಿ ನನಗೆ ಕುಡಿಯಲು ನೀರು ಕೊಡು" ಎಂದು ಆನಂದನು ಉತ್ತರಿಸಿದನು.

ಸಮಾಜದಲ್ಲಿ ನಡೆದು ಬಂದಿದ್ದ ಜಾತಿ, ಪಂಗಡಗಳ ಅನೇಕ ವಿಭಾಗಗಳನ್ನು ಬುದ್ಧನು ಒಪ್ಪಲಿಲ್ಲ. ಮೇಲು-ಕೀಳು ಜಾತಿಯವರೆಂಬ ಸಂಪ್ರದಾಯವನ್ನು ಬುದ್ಧನು ಎಂದೂ ಒಪ್ಪಿರಲಿಲ್ಲ. ಈ ಕಾರಣದಿಂದಲೇ ಬುದ್ಧನ ಶಿಷ್ಯನಾದ ಆನಂದನು ಚಂಡಾಲನ ಕನ್ಯೆಯಿಂದ ನೀರು ಪಡೆದು ಕುಡಿಯಲು ಹಿಂಜರಿಯಲಿಲ್ಲ.

# ಕೆಲವು ಕಥೆಗಳು

ಭಗವಾನ್ ಬುದ್ಧನ ಧೀರ್ಘ ಭಿಕ್ಕು ಜೀವನಕ್ಕೆ ಸಂಬಂಧಿಸಿದಂತೆ ಅನೇಕ ಕಥೆಗಳಿವೆ. ಒಂದು ಕಡೆಯಲ್ಲಿ ಅವನನ್ನು ದೇವತೆಯನ್ನಾಗಿ ರೂಪಿಸ ಲಾಗಿದೆ. ರೋಹಿಣೀ ನದಿಯ ನೀರಿನ ಹಂಚಿಕೆಯ ಬಗ್ಗೆ ಬುದ್ಧನ ಬುಡ ಕಟ್ಟಿಗೆ ಸೇರಿದ ಶಾಕ್ಯರಿಗೂ ಖೋಲಿಯವರಿಗೂ ವಿವಾದ ಉಂಟಾಗಿ ಇಬ್ಬರೂ ಯುದ್ಧ

ಸನ್ನದ್ಧರಾಗಿ ನಿಂತರು. ಆ ಎರಡು ಸೈನ್ಯಗಳೂ ಯುದ್ಧ ಭೂಮಿಯಲ್ಲಿ ಎದುರು ಬದುರಾಗಿ ನಿಂತವು. ಈ ವಿಷಯ ತಿಳಿದಾಗ ಬುದ್ಧನು ಯುದ್ಧ ಭೂಮಿಗೆ ತೆರಳಿ ಎರಡೂ ಸೈನ್ಯಗಳ ಮಧ್ಯೆ ನಿಂತನು. ಯುದ್ಧ ಮಾರ್ಗವನ್ನು ತೊರೆದು ಅಹಿಂಸೆಯ ಮಾರ್ಗವನ್ನು ಪಾಲಿಸುವಂತೆ ಎರಡು ಪಕ್ಷದವರಿಗೂ ನೀತಿ ಹೇಳಿದನು. ಇದರಿಂದ ಪ್ರಭಾವಿತರಾದ ಎರಡೂಪಕ್ಷದವರು ಯುದ್ಧ ಮಾಡುವುದನ್ನು ಬಿಟ್ಟು ಒಪ್ಪಂದವನ್ನು ಮಾಡಿಕೊಂಡರು. ಹೀಗಾಗಿ ಒಂದು ಭಯಾನಕ ರಕ್ತಪಾತವನ್ನು ತಡೆಯಲಾಯಿತು.

ಒಮ್ಮೆ ಬುದ್ಧನು ಎಂದಿನಂತೆ ಭಿಕ್ಷೆಗಾಗಿ ಹೋಗುತ್ತಿದ್ದ ದಾರಿಯಲ್ಲಿ ಮತಿಗೆಟ್ಟ ಯುವಕನೊಬ್ಬನು ಕಾರಣವಿಲ್ಲದೆ ಬುದ್ಧನನ್ನು ಬೈಯತೊಡಗಿದನು. ಶಾಂತವಾಗಿ ಬುದ್ಧನು ಅವುಗಳನ್ನು ಕೇಳುತ್ತಿದ್ದನು. ನಂತರ ಮೃದು ಧ್ವನಿಯಲ್ಲಿ "ಒಬ್ಬ ದಾನಿಯು ಕೊಡುವ ಒಂದು ವಸ್ತುವನ್ನು ಇನ್ನೊಬ್ಬನು ನಿರಾಕರಿಸಿದರೆ ಅದು ಯಾರಿಗೆ ಸೇರಬೇಕು ತಮ್ಮಾ?" ಎಂದು ಕೇಳಿದನು.

"ಹಾಗಾದರೆ ಆ ವಸ್ತು ದಾನಿಗೇ ವಾಪಸ್ಸು ಸೇರಬೇಕು" ಎಂದು ಯುವಕನು ಉತ್ತರ ಕೊಟ್ಟನು.

"ನೋಡು, ತಮ್ಮಾ! ನೀನಾಡಿದ ಬೈಗುಳ ಯಾವುದೂ ನನ್ನನ್ನು ಮುಟ್ಟಲಾರವು ಕಂಡೆಯಾ? ಶಬ್ದದ ಬೆನ್ನು ಹಿಂದೆಯೇ ಹೇಗೆ ಅದರ ಪ್ರತಿಧ್ವನಿ ಬರುತ್ತದೆಯೋ, ಒಂದು ವಸ್ತುವನ್ನು ಹೇಗೆ ಅದರ ನೆರಳು ಹಿಂಬಾಲಿಸುತ್ತದೆಯೋ, ಅಂತೆಯೇ ದುಷ್ಟ ಫಲಗಳು ಕೆಟ್ಟ ಕೆಲಸಗಳ ಹಿಂದೆಯೇ ಕಾದಿರುತ್ತವೆ, ತಮ್ಮಾ!" ಎಂದು ವಿವರಿಸಿದನು.

ಆಗಿಂದಾಗ್ಗೆ ನೀತಿಯನ್ನು ಮನಗಾಣುವಂತೆ ಬೋಧಿಸುವಾಗ ದೃಷ್ಟಾಂತಕ್ಕಾಗಿ ಕಥೆಗಳನ್ನು ಬುದ್ಧನು ಹೇಳುತ್ತಿದ್ದನು. ವಾರಣಾಸಿಯ ರಾಜನ ಕಥೆಯೂ ದೃಷ್ಟಾಂತಕ್ಕೆ ಹೇಳಿದ್ದೇ ಕಥೆ. ಈ ವಾರಣಾಸಿಯ ರಾಜನು ದರ್ಪದಿಂದ ರಾಜ್ಯವನ್ನು ಆಳುತ್ತಿದ್ದನು. ಪಕ್ಕದ ಕೋಸಲ ದೇಶದ ಮೇಲೆ ಕಾರಣವಿಲ್ಲದೆ ಯುದ್ಧ ಹೂಡಿದನು. ಆ ಬಡಪಾಯಿ ರಾಜ-ರಾಣಿಯರು ತಲೆ ತಪ್ಪಿಸಿಕೊಂಡು ಹೋಗಿ ವಾರಣಾಸಿಯ ಕುಂಬಾರನೊಬ್ಬನ ಮನೆಯಲ್ಲಿ ವಾಸವಾಗಿದ್ದರು. ಇವರಿಗೆ ಮಗನೊಬ್ಬನು ಹುಟ್ಟಿದನು. ಅವನಿಗೆ ಧಿಘಾವು ಎಂದು ಹೆಸರಿಟ್ಟರು.

ಧಿಘಾವು ಸಣ್ಣ ಹುಡುಗನಾಗಿದ್ದಾಗಲೇ ಇವರು ತಲೆಮರೆಸಿಕೊಂಡಿರುವುದು ತಿಳಿದು ಹೋಯಿತು. ವಾರಣಾಸಿಯ ರಾಜನು ಅವರಿಗೆ ಮರಣದಂಡನೆಯ ಶಿಕ್ಷೆ ವಿಧಿಸಿದನು. ತಂದೆ ತಾಯಿಯರನ್ನು ಗಲ್ಲಿಗೇರಿಸುವ ಸಮಯದಲ್ಲಿ ಧಿಘಾವು

ಅಲ್ಲೇ ಇದ್ದ. ಆಗ ಆ ತಂದೆ "ಮಗು, ದ್ವೇಷವನ್ನು ದ್ವೇಷದಿಂದ ಗೆಲ್ಲಲು ಸಾಧ್ಯವಿಲ್ಲ. ದ್ವೇಷವನ್ನೇ ಗೆದ್ದುಕೊಂಡರೆ ಮಾತ್ರ ಜಯ ಸಾಧ್ಯ; ಶಾಂತಿ ಸಿಕ್ಕಬಹುದು ಎಂದು ತಿಳಿ" ಎಂದು ಅಂತಿಮ ಹಿತವಚನವನ್ನು ಹೇಳಿದನು.

ಧಿಘಾವು ಬೆಳೆಯುತ್ತಾ ಸಂಗೀತ ಕಲೆಯಲ್ಲಿ ನಿಪುಣನಾದನು. ವಾರಣಾಸಿಯ ರಾಜ ಅವನನ್ನು ಅರಮನೆಯ ಕೆಲಸಕ್ಕೆ ಇಟ್ಟುಕೊಂಡನು. ಅವನು ತನ್ನ ಕಾರ್ಯದಕ್ಷತೆಯಿಂದಲೇ ಮೇಲೇರುತ್ತಾ ಎಲ್ಲರ ವಿಶ್ವಾಸವನ್ನೂ ಗಳಿಸುತ್ತಾ ದೊಡ್ಡ ಪದವಿಗೇರಿದನು. ಒಂದು ಸಾರಿ ರಾಜನು ಧಿಘಾವುವನ್ನು ಬೇಟೆಗೆ ತನ್ನೊಡನೆ ಕರೆದೊಯ್ದನು. ಒಂದು ನಿರ್ಜನ ಪ್ರದೇಶದಲ್ಲಿ ಸುಧಾರಿಸಿಕೊಳ್ಳಲು ತಂಗಿದ ರಾಜ ಧಿಘಾವುವಿನ ತೊಡೆಯ ಮೇಲೆ ತಲೆ ಇಟ್ಟು ಸುಖವಾಗಿ ನಿದ್ರಿಸಿದನು.

ಧಿಘಾವು ಇಂಥ ಸಮಯವನ್ನೇ ಬಹಳ ಕಾಲದಿಂದ ಕಾಯುತ್ತಿದ್ದನು. ಒರೆಯಿಂದ ಕತ್ತಿಯನ್ನು ತೆಗೆದು ರಾಜನಿಗೆ "ನೀನು ನನ್ನ ತಂದೆಯನ್ನೂ, ತಾಯಿಯನ್ನೂ ಕೊಲ್ಲಿಸಿದ್ದೆ. ಇದೀಗ ನಿನ್ನ ಸರದಿ" ಎಂದು ಕೈ ಎತ್ತಿದನು.

ಆ ಕ್ಷಣಕ್ಕೆ ತನ್ನ ತಂದೆ ಹೇಳಿದ್ದ ಅಂತಿಮ ಹಿತವಾಕ್ಯ ಜ್ಞಾಪಕಕ್ಕೆ ಬಂತು. ಕೂಡಲೇ ಕತ್ತಿಯನ್ನು ಒರೆಗೆ ತಳ್ಳಿದನು. ಹೆದರಿದ್ದ ರಾಜನನ್ನು ಸುರಕ್ಷಿತವಾಗಿ ಅರಮನೆಗೆ ಕರೆತಂದನು. ಆತನ ಕ್ಷಮಾ ಬುದ್ಧಿಯು ರಾಜನ ಮೇಲೆ ತುಂಬಾ ಪ್ರಭಾವ ಬೀರಿತು. ತನ್ನ ದ್ವೇಷ ರೂಡಿಸಿದ್ದ ತನ್ನ ಹಿಂದಿನ ಕ್ರೂರ ಕಾರ್ಯಕ್ಕಾಗಿ ಈಗ ಪಶ್ಚಾತ್ತಾಪ ಪಟ್ಟನು. ಅವನ ತಂದೆಯ ರಾಜ್ಯವನ್ನೂ ಕೋಶವನ್ನೂ ಧಿಘಾವುಗೆ ಹಿಂದಕ್ಕೆ ಕೊಟ್ಟು ಅವನ ಮಗಳನ್ನು ಅವನಿಗೆ ಮದುವೆ ಮಾಡಿಕೊಟ್ಟನು. ಧಿಘಾವುವಿನಂತೆ ಕ್ಷಮಾಶೀಲನಾಗಿರಬೇಕೆಂದು ಜನರಿಗೆ ಆಗಿಂದಾಗ್ಗೆ ಬುದ್ಧನು ಬೋಧಿಸುತ್ತಿದ್ದನು.

ತಾನು ಬೋಧಿಸುತ್ತಿದ್ದ ಮಧ್ಯಮ ಮಾರ್ಗವನ್ನು ಶೃತಿ ಹಿಡಿದ ವೀಣೆಗೆ ಹೋಲಿಸುತ್ತಿದ್ದನು. "ವೀಣೆಯ ತಂತಿ ಸಡಿಲವಾದರೆ ನುಡಿಸಲು ಸಾಧ್ಯವಿಲ್ಲ. ಹೆಚ್ಚು ಬಿಗಿಯಾದರೆ ತಂತಿಯೇ ಕಿತ್ತು ಹೋಗುತ್ತದೆ. ಎಷ್ಟು ಅಗತ್ಯವೋ ಅಷ್ಟೇ ಬಿಗಿ ಇರಬೇಕು. ಹಾಗೆಯೇ ಜೀವನವು ಭೋಗವಿಲಾಸವೂ ಆಗಿರಬಾರದು, ಕಷ್ಟಮಯವೂ ಆಗಿರಬಾರದು" ಎಂದು ಹೇಳುತ್ತಿದ್ದನು.

ಇನ್ನೊಮ್ಮೆ ಒಬ್ಬ ಶಿಷ್ಯನು ನಿರ್ವಾಣ ಸ್ಥಿತಿಯನ್ನು ವಿವರಿಸಬೇಕೆಂದು ಕೇಳಿಕೊಂಡನು. ಸನಿಹದಲ್ಲೇ ಮರಳಿನಲ್ಲಿ ಮನೆಕಟ್ಟಿ ಆಡುತ್ತಿದ್ದ ಹುಡುಗರ ಕಡೆ

ತೋರಿಸಿ ಬುದ್ಧನು ಹೇಳಿದನು : "ಎಲ್ಲಿಯವರೆವಿಗೆ ಆಟ ಮುಗಿಯುವುದಿಲ್ಲವೋ ಅಲ್ಲಿಯವರೆವಿಗೆ ಮನೆ ಕಟ್ಟುವುದು ಅದನ್ನು ಅಚ್ಚುಕಟ್ಟಾಗಿ ನೋಡಿಕೊಳ್ಳುವುದು ಮುಂದುವರೆಯುತ್ತದೆ"

"ಹೌದು", ಶಿಷ್ಯ ತಲೆದೂಗಿದ.

"ಆಟ ಮುಗಿದಮೇಲೆ ಈ ಹುಡುಗರೇ ಆ ಮನೆಯನ್ನು ಒಡೆದು ಹಾಕುವುದಿಲ್ಲವೇ?" ಬುದ್ಧನು ಕೇಳಿದನು.

"ಹೌದು, ಗುರುಗಳೇ!"

"ಇದೇ ರೀತಿ ಮನುಷ್ಯನು ಜೀವಿಸಿರಬೇಕೆಂದು ಆಸೆ ಇರುವಷ್ಟು ಕಾಲವೂ ತನ್ನನ್ನು ತಾನು ಎಚ್ಚರಿಕೆಯಿಂದ ಕಾಪಾಡಿಕೊಳ್ಳುತ್ತಾನೆ. ಈ ಆಸೆ ನಾಶವಾದೊಡನೆ ದೇಹವೂ ಬಿದ್ದು, ಚದುರಿ ಲೀನವಾಗುತ್ತದೆ" ಎಂದು ವಿವರಿಸಿದನು.

ಇನ್ನೊಮ್ಮೆ ಬುದ್ಧನು ಶ್ರಾವಸ್ತಿ ಕಡೆ ಹೋಗುತ್ತಿದ್ದನು. ದಾರಿಯಲ್ಲಿ ಕಿಸಾ ಗೌತಮಿ ಎಂಬ ಒಬ್ಬಳು ತನ್ನ ಸತ್ತ ಮಗುವನ್ನು ತಂದು ಅವನ ಪಾದದ ಮೇಲೆ ಇಟ್ಟು ಅದನ್ನು ಹೇಗಾದರೂ ಮಾಡಿ ಬದುಕಿಸಿಕೊಡಬೇಕೆಂದು ಪ್ರಾರ್ಥಿಸಿದಳು. ಒಂದು ದಿನ ಈ ಹುಡುಗ ತೋಟದಲ್ಲಿ ಹಾವು ಕಚ್ಚಿ ಸತ್ತಿದ್ದನು. ಇದರಿಂದ ಕಿಸಾ ಗೌತಮಿಗೆ ಹುಚ್ಚು ಹಿಡಿದಂತಾಯಿತು. ಮಗನ ಶವವನ್ನು ಅನೇಕರ ಬಳಿ ಕೊಂಡೊಯ್ದು ಯಾರಾದರೂ ಬದುಕಿಸುತ್ತಾರೇನೋ ಎಂದು ಪ್ರಯತ್ನಿಸಿದಳು.

"ಕಿಸಾ ಗೌತಮಿಗೆ ಹುಚ್ಚು ಹಿಡಿದಿದೆಯಾ?" ಎಂದು ಯಾರೋ ಕೇಳಿದರು.

ಅದೇ ದಾರಿಯಲ್ಲಿ ಒಬ್ಬ ಪ್ರವಾಸಿಗ ಹೋಗುತ್ತಿದ್ದ. "ಇಲ್ಲೇ ಸ್ವಲ್ಪ ದೂರದಲ್ಲಿ ಗೌತಮ ಬುದ್ಧನೆಂಬ ಮಹಾತ್ಮ ಬರುತ್ತಿದ್ದಾನೆ. ಅವನು ಅನೇಕರ ದುಃಖಗಳನ್ನು ನಿವಾರಿಸಿದ್ದಾನೆ. ನೀನೂ ಅವನ ಬಳಿ ಹೋಗು. ಅವನೇ ನಿನ್ನ ದುಃಖವನ್ನು ನಿವಾರಿಸಬಲ್ಲನು" ಎಂದು ಆ ಪ್ರವಾಸಿಗ ಹೇಳಿದನು.

"ಅವರೆಲ್ಲಿದ್ದಾರೆ?" ಕಿಸಾ ಗೌತಮಿ ವ್ಯಾಕುಲದಿಂದ ಕೇಳಿದಳು.

"ಅವನು ಈ ರಸ್ತೆಯಲ್ಲೇ ಬರುತ್ತಿದ್ದಾನೆ" ಎಂದು ಅವನು ಹೇಳಿದನು.

ಗೌತಮಿಯು ತನ್ನ ಸತ್ತ ಮಗುವನ್ನು ಎತ್ತಿಕೊಂಡು ಬುದ್ಧನು ಬರುತ್ತಿದ್ದ ದಾರಿಯಲ್ಲಿ ಓಡಿದಳು. ಗೌತಮ ಬುದ್ಧನನ್ನು ಕಂಡೊಡನೆ ಅವನ ಪಾದಗಳ

ಮೇಲೆ ಮಗುವಿನ ಹೆಣವನ್ನು ಇಟ್ಟು "ಮಹಾ ಪ್ರಭೋ, ಈ ದುಃಖಿತಳ ಮೇಲೆ ಕರುಣೆ ತೋರಿಸಿ. ಹೇಗಾದರೂ ಮಾಡಿ ನನ್ನ ಈ ಮಗನನ್ನು ಬದುಕಿಸಿ" ಎಂದು ಕಳವಳದಿಂದ ಪ್ರಾರ್ಥಿಸಿಕೊಂಡಳು.

"ಒಂದು ಹಿಡಿ ಸಾಸುವೆ ಕಾಳನ್ನು ತೆಗೆದುಕೊಂಡು ಬಾ. ಈ ಮಗುವನ್ನು ಬದುಕಿಸುತ್ತೇನೆ" ಎಂದು ಬುದ್ಧನು ಹೇಳಿದನು.

"ಇದೀಗ ತರುತ್ತೇನೆ, ಮಹಾಸ್ವಾಮಿ" ಎನ್ನುತ್ತಾ ಗೌತಮಿಯು ಹಿಂತಿರುಗುತ್ತಿದ್ದಂತೆಯೇ ಬುದ್ಧನು "ನೋಡು ಮಗಳೇ, ಗಮನಿಸು; ನೀನು ಯಾರಿಂದ ಸಾಸುವೆ ಕಾಳನ್ನು ಪಡೆಯುತ್ತೀಯೋ ಅವರ ಮನೆಯಲ್ಲಿ ಮಗುವಾಗಲೀ, ಗಂಡಹೆಂಡತಿಯರಾಗಲೀ, ತಂದೆತಾಯಿಯರಾಗಲೀ, ಸ್ನೇಹಿತರಾಗಲೀ ಯಾರೂ ಸತ್ತಿರಬಾರದು, ಕಂಡೆಯಾ" ಎಂದು ಎಚ್ಚರಿಸಿದನು.

ಹಿಡಿ ಸಾಸುವೆ ಕಾಳಿಗಾಗಿ ಮನೆಯಿಂದ ಮನೆಗೆ ಅಲೆಯುತ್ತಾ ನಡೆದಳು. ಪ್ರತಿ ಮನೆಯಲ್ಲೂ "ಅಮ್ಮಾ, ನಿಮ್ಮ ಮನೆಯಲ್ಲಿ ಮಗ, ಮಗಳು, ತಂದೆ, ತಾಯಿ ಬಂಧು ಅಥವಾ ಸ್ನೇಹಿತನಾಗಲೀ ಯಾರೂ ಸತ್ತಿಲ್ಲವೇ" ಎಂದು ಕೇಳುತ್ತಿದ್ದಳು.

"ಬದುಕಿ ಉಳಿದವರಿಗಿಂತ ಸತ್ತ ಬಂಧುಗಳೇ ಜಾಸ್ತಿ" ಎಂದೇ ಎಲ್ಲರೂ ಹೇಳಿದರು.

ಈಗ ಏನೂ ಮಾಡುವುದು ಸಾಧ್ಯವಿರಲಿಲ್ಲ. ಗೌತಮಿ ನಿರಾಶೆಯಾದಳು. ಅವಳ ಮನಸ್ಸು ನೊಂದು ಹೋಯಿತು. ಅವಳು ಅವಳ ಮಗನ ಪ್ರೀತಿಯಲ್ಲಿ ತಲ್ಲೀನಳಾಗಿ ಅಂಧಳಾಗಿ ಹೋಗಿದ್ದಳು. ಅವಳಿಗೆ ಜೀವನದ ಸತ್ಯದ ಅರಿವಾಗಿರಲಿಲ್ಲ. ತಕ್ಷಣ ಅವಳಿಗೆ "ಮೃತ್ಯು ಜೀವನದ ಅವಿಚ್ಛಿನ್ನ ಭಾಗ" ಎಂಬುದು ಅರ್ಥವಾಯಿತು.

ಅವಳು ಸತ್ತ ಮಗನ ಅಂತಿಮ ಸಂಸ್ಕಾರ ಮಾಡಿ ಗೌತಮ ಬುದ್ಧನ ಬಳಿಗೆ ಬಂದಳು. ಬುದ್ಧನು ಅವಳನ್ನು ಸಮಾಧಾನ ಪಡಿಸಿ "ಇನ್ನು ದುಃಖಿಸಬೇಡ" ಎಂದು ಹೇಳಿದನು.

## ಅಸೂಯಾ ಮೂರ್ತಿ ದೇವದತ್ತ

ದೇವದತ್ತನೆಂಬ ದಾಯಾದಿಯೊಬ್ಬನು ಸಿದ್ಧಾರ್ಥನು ಸಂಸಾರ ತ್ಯಜಿಸುವ ಮುನ್ನ ಅವನ ಎಡೆಬಿಡದ ಒಡನಾಡಿ ಆಗಿದ್ದನು. ಆಗಿನಿಂದಲೂ ಈ ದೇವ ದತ್ತನು ಸಿದ್ಧಾರ್ಥನೆಂದರೆ ಅಸೂಯೆ ಪಡುತ್ತಾ ಏನಾದರೂ ಕಿರುಕುಳ ಕೊಡುತ್ತಿದ್ದನು. ಒಮ್ಮೆಯಂತೂ ರಾಜ ಕುಮಾರನಿಗೆ ಅತಿಪ್ರಿಯವಾಗಿದ್ದ ಒಂದು ಬಿಳಿಯಾನೆಯನ್ನು ಕೊಂದೇ ತನ್ನ ಹೊಟ್ಟೆ ಕಿಚ್ಚನ್ನು ತೀರಿಸಿಕೊಂಡಿದ್ದನು.

ಬುದ್ಧನು ಜ್ಞಾನೋದಯವಾದ ನಂತರ ಕಪಿಲವಸ್ತುವಿಗೆ ಮೊದಲನೆಯ ಸಲ ಭೇಟಿ ಕೊಟ್ಟಾಗ ಶಾಕ್ಯರಾಜ ಮನೆತನದವರೊಡನೆ ದೇವದತ್ತನೂ ಸಹ ಸಂಘವನ್ನು ಸೇರಿದ್ದನು. ಬುದ್ಧನಾದರೋ ತನ್ನ ಹಳೆಯ ಮಿತ್ರನಾದ ದೇವದತ್ತನನ್ನು ವಿಶೇಷ ಮರ್ಯಾದೆ ಕೊಟ್ಟು ಬರಮಾಡಿಕೊಂಡಿದ್ದನು. ಬಹು ಬೇಗ ಈತನು ಸಂಘದಲ್ಲೂ ಪ್ರಮುಖ ಸ್ಥಾನಕ್ಕೆ ಏರಿ ಹಿರಿಯನೆನಿಸಿಕೊಂಡನು.

ಸಂಘಕ್ಕೆ ಬುದ್ಧನೇ ಎಲ್ಲರಿಗಿಂತ ಮೇಲಿನ ಯಜಮಾನನಾಗಿದ್ದನು. ಇದರಿಂದ ದೇವದತ್ತನ ಅಸೂಯೆ ಹೆಚ್ಚಿತು. ತಾನೇ ಸಂಘದ ಯಜಮಾನನಾಗಬೇಕೆಂದು ಕರುಬಿದನು. ಇದಕ್ಕಾಗಿ ಬುದ್ಧನಲ್ಲಿಗೆ ನೇರವಾಗಿ ಬಂದು "ಸ್ವಾಮಿ, ಈಗ ನಿಮಗೆ ವಯಸ್ಸಾಗುತ್ತಾ ಬಂದಿದೆ. ನೀವು ವಿಶ್ರಾಂತಿ ಪಡೆಯಿರಿ. ಸಂಘದ ಯಜಮಾನಿಕೆಯ ಆರಾಮವಾಗಿರಬಹುದು" ಎಂದು ವಿನಂತಿಸಿಕೊಂಡನು.

ದೇವದತ್ತನ ಪ್ರಾರ್ಥನೆಯ ಹಿಂದೆ ಅಡಗಿದ್ದ ಸ್ವಾರ್ಥತೆಯನ್ನು ಕಂಡುಕೊಂಡ ಬುದ್ಧನು "ನನ್ನ ಜೀವಿತ ಕಾಲದಲ್ಲಿ ಸಂಘದ ಹೊಣೆಗಾರಿಕೆ ನನಗೇ ಇದ್ದುಕೊಂಡು ಹೋಗಲಿ" ಎಂದನು.

ಸಂಘದ ಪ್ರಧಾನ ಪಟ್ಟ ತನಗೆ ದೊರಕದಿದ್ದುದಕ್ಕೆ ದೇವದತ್ತ ತುಂಬಾ ದುಃಖಿತನಾದನು. ಬೇರೆ ದಾರಿ ಕಾಣದೆ, ತನ್ನ ಸ್ವಾರ್ಥ ಸಾಧನೆಗಾಗಿ ಬುದ್ಧನ ಅವಸಾನಕ್ಕೆ ಎಂಟು ವರ್ಷ ಮುಂಚೆ ಸಂಘವನ್ನೇ ಒಡೆದು ತನ್ನ ಸ್ವಂತ ಅನುಯಾಯಿಗಳನ್ನೂ, ಆಶ್ರಿತರನ್ನೂ ಸೇರಿಸಿಕೊಂಡು ಮತ್ತೊಂದು ಸಂಘವನ್ನು ನಿರ್ಮಿಸಿದನು. ರಾಜಗೃಹಕ್ಕೆ ಹೋಗಿ ಸುಮಾರು ಐದುನೂರು ಬಿಕ್ಕುಗಳನ್ನು ತನ್ನ ಪಂಗಡಕ್ಕೆ ಸೇರಿಸಿಕೊಳ್ಳುವುದರಲ್ಲಿಯೂ ಸಮರ್ಥನಾದನು.

ಬುದ್ಧನು ಶಾರಿಪುತ್ರನನ್ನೂ, ಮೊಗ್ಗಲ್ಲಾನನನ್ನೂ ಸಂಘದಿಂದ ಹೊರಹೋಗುತ್ತಿದ್ದ ಬಿಕ್ಕುಗಳೊಡನೆ ಸಂಧಿಗಾಗಿ ಕಳುಹಿಸಿಕೊಟ್ಟನು. ಇವರಿಬ್ಬರನ್ನೂ ನೋಡುತ್ತಲೇ ದೇವದತ್ತನು ಬುದ್ಧನ ಪ್ರಮುಖ ಶಿಷ್ಯರು ತನ್ನ ಪಕ್ಷಕ್ಕೇ ಸೇರಲು ಬಂದಿರುವವರೆಂದೇ ಭ್ರಮಿಸಿ ತನ್ನ ಶಿಷ್ಯರಿಗೂ ಉಪದೇಶ ನೀಡುವಂತೆ ಆಹ್ವಾನಿಸಿದನು.

ಶಾರಿಪುತ್ರ ಮತ್ತು ಮೊಗ್ಗಲ್ಲಣ್ಣರಿಬ್ಬರೂ ಆ ಐದುನೂರು ಶಿಷ್ಯರೊಡನೆ ವಾದಿಸಿ ತಮ್ಮ ತಪ್ಪನ್ನು ಅರಿತುಕೊಳ್ಳುವಂತೆ ಮಾಡಿದರು. ಎಲ್ಲರೂ ತಪ್ಪುದಾರಿಯನ್ನು ಬಿಟ್ಟು ಧರ್ಮದ ತತ್ವವನ್ನು ತಿಳಿದು ಬುದ್ಧನ ದಾರಿಗೇ ಹಿಂತಿರುಗಿದರು.

ಇದರಿಂದ ದೇವದತ್ತನು ಇನ್ನೂ ಕೋಪಗೊಂಡನು. ಬುದ್ಧನ ಮೇಲಿನ ದ್ವೇಷ

ಎಷ್ಟು ಬೆಳೆಯಿತೆಂದರೆ ಅವನನ್ನು ಕೊಲ್ಲಲೂ ನಿರ್ಧರಿಸಿದನು. ಇದಕ್ಕಾಗಿ ಮಗಧ ದೇಶದ ರಾಜನಾದ ಬಿಂಬಸಾರನ ಮಗ ಅಜಾತಶತ್ರುವಿನೊಡನೆ ಪಿತೂರಿ ನಡೆಸಿ ರಹಸ್ಯವಾಗಿ ಬೆಂಬಲ ಪಡೆದುಕೊಂಡನು.

ಬಿಂಬಸಾರನು ಬುದ್ಧನ ಪಕ್ಕಾ ಶಿಷ್ಯನಾಗಿದ್ದನು. ಆ ರಾಜನು ಬದುಕಿರುವವರೆಗೆ ಮಗಧ ರಾಜ್ಯದಲ್ಲಿ ತನ್ನ ಹಂಚಿಕೆ ಏನೂ ನಡೆಯುವುದಿಲ್ಲವೆಂದು ಮನಗಂಡನು. ಆದ್ದರಿಂ ಅಜಾತಶತ್ರುವಿನ ಬಳಿ ಬಂದು "ನಿನ್ನ ತಂದೆಯೇನೂ ಮುದಿಯನಲ್ಲ. ದೃಢವಾಗಿಯೇ ಇದ್ದಾನೆ. ನೀನು ರಾಜನಾಗಲು ಅವಕಾಶವಿದೆಯೆಂದು ನಂಬಿರುವೆಯಾ?" ಎಂದು ಕೇಳಿದನು.

ಅಜಾತಶತ್ರುವಿನ ಮನಸ್ಸು ಡೋಲಾಯಮಾನವಾಯಿತು.

"ಹೇಗೋ ನಿಮ್ಮಪ್ಪ ಸತ್ತರೆ ಮಾತ್ರ ನೀನು ರಾಜನಾಗಬಹುದಷ್ಟೇ" ಎಂದು ಅಜಾತಶತ್ರುವನ್ನು ದುಷ್ಟ ಕಾರ್ಯಕ್ಕೆ ಪ್ರಚೋದಿಸಿದನು.

ಅಜಾತಶತ್ರುವನ್ನು ತನ್ನ ತಂದೆಯನ್ನು ಕೊಲ್ಲುವಂತೆ ಪ್ರೇರೇಪಿಸಲು ಹೆಚ್ಚು ಸಮಯ ಬೇಕಾಗಲಿಲ್ಲ. ಒಂದು ದಿನ ರಾಜನ ಅಂತಃಪುರದ ಕೊಠಡಿಯೊಳಕ್ಕೆ ಅವನು ಕೈಯೆತ್ತಿ ಬಂದಾಗ ರಾಜಭಟರು ಚೂರಿ ಸಹಿತ ಅವನನ್ನು ಹಿಡಿದು ರಾಜನ ಮುಂದೆ ಹಾಜರುಪಡಿಸಿದರು. ಆದರೆ ಬಿಂಬಸಾರನ ಮನಸ್ಸು ತನ್ನ ಮಗನಿಗೆ ತಕ್ಕ ಶಿಕ್ಷೆ ವಿಧಿಸುವಷ್ಟು ಕಠಿಣವಾಗಲಿಲ್ಲ. ಬುದ್ಧನ ಸಂಘಕ್ಕೆ ಸೇರಿದ ಮೇಲೆ ಅವನು ಕ್ರೂರ ಸ್ವಭಾವವನ್ನು ತ್ಯಜಿಸಿದ್ದನು. ಬುದ್ಧನ ನೀತಿಬೋಧೆಯನ್ನು ಆದರ್ಶವನ್ನಾಗಿಟ್ಟು ಕೊಂಡು ರಾಜ್ಯವನ್ನೇ ತನ್ನ ಮಗನಿಗೆ ಆಳುವಂತೆ ಬಿಟ್ಟುಕೊಟ್ಟು ವಿರಕ್ತನಾದನು. ಸಂಸಾರವನ್ನು ತ್ಯಜಿಸಿ ಭಿಕ್ಷುವಾದನು.

ಅಜಾತಶತ್ರು ರಾಜನಾದಮೇಲೆ ರಾಜಗೃಹದಲ್ಲಿ ದೇವದತ್ತನೇ ಮುಖ್ಯ ಸೂತ್ರಧಾರಿಆದನು. ಬುದ್ಧನು ಮುಂದಿನ ಮಳೆಗಾಲವನ್ನು ರಾಜಗೃಹದ ಆಶ್ರಮ ದಲ್ಲಿ ಕಳೆಯಲು ಬರಲಿರುವನೆಂದು ತಿಳಿದು ಅಲ್ಲಿ ಅವನನ್ನು ಕೊಲ್ಲುವ ಉಪಾಯ ಹೂಡಿದನು.

ಅಜಾತಶತ್ರುವಿನ ಸೈನ್ಯದಿಂದ ಉತ್ತಮ ಬಿಲ್ಲುಗಾರರನ್ನು ಆರಿಸಿಕೊಂಡು ಬುದ್ಧನು ರಾಜಗೃಹಕ್ಕೆ ಬರುವ ದಾರಿಯಲ್ಲಿ ನಿಲ್ಲಿಸಿದನು. ಆದರೆ ಈ ಬಿಲ್ಲುಗಾರರು ಬುದ್ಧನು ಕಣ್ಣಿಗೆ ಬಿದ್ದಕೂಡಲೇ ಅವನ ದೈವೀ ಖಳೆಯನ್ನು ಕಂಡು ಮೋಹಿತರಾಗಿ ತಮ್ಮ ತಪ್ಪನ್ನೊಪ್ಪಿಕೊಂಡು ಅವನ ಪಾದದಲ್ಲಿ ನಮಿಸಿ ಆಶ್ರಯ ಕೋರಿದರು.

ಕರುಣಾಳುವಾದ ಬುದ್ಧನು ಅವರನ್ನು ಮನ್ನಿಸಿ ದೇವದತ್ತನಲ್ಲಿಗೆ ಕಳುಹಿಸಿಕೊಟ್ಟನು.

ಈ ಬಿಲ್ಲುಗಾರರಿಂದ ತನಗುಂಟಾದ ಸೋಲಿನಿಂದ ದೇವದತ್ತನ ಕೋಪ ಎಲ್ಲೆ ಮೀರಿತು. ಯಾವ ಸಮಯದಲ್ಲಾದರೂ, ಯಾವ ರೀತಿಯಲ್ಲಾದರೂ ಗೌತಮ ಬುದ್ಧನನ್ನು ಕೊಲ್ಲಬೇಕೆಂದು ಅವನು ದೃಢ ನಿಶ್ಚಯ ಮಾಡಿದನು. ಒಂದು ದಿನ ಗೌತಮ ಬುದ್ಧನು ಗಿದ್ ಎಂಬ ಪರ್ವತದ ತಪ್ಪಲಿನಲ್ಲಿ ಧ್ಯಾನಾಸಕ್ತನಾಗಿ ಕುಳಿತಿದ್ದನು. ದೇವದತ್ತನು ಒಡನೇ ಪರ್ವತದ ಮೇಲೇರಿ ಶಿರದಲ್ಲಿದ್ದ ಒಂದು ದೊಡ್ಡ ಬಂಡೆಯನ್ನು ಬುದ್ಧನ ಮೇಲೆ ಬೀಳುವಂತೆ ತಳ್ಳಿದನು. ಆದರೆ ಆ ಬಂಡೆ ಜೋರಾಗಿ ಉರುಳಿ ಇನ್ನೊಂದು ಬಂಡೆಗೆ ಅಪ್ಪಳಿಸಿದ ರಭಸಕ್ಕೆ ಚೂರು ಚೂರಾಗಿ ಚದುರಿ ಹೋಯಿತು.

ದೇವದತ್ತನ ಕೋಪ ಸಪ್ತ ಆಕಾಶಗಳಿಗೆ ಏರಿತು. ರಾಜಗೃಹಕ್ಕೆ ಸೇರಿದ ಮದವೇರಿದ ನಳಗಿರಿ ಎಂಬ ಆನೆಯ ಮಾವುತನನ್ನು ಕರೆಸಿ ಅವನಿಗೆ ಕೈತುಂಬಾ ಹಣಕೊಟ್ಟು "ನಾಳೆ ಬುದ್ಧನು ರಸ್ತೆಯಲ್ಲಿ ನಡೆದು ಬರುವಾಗ ಆನೆಯನ್ನು ಅವನತ್ತ ಹಾಯಿಸಿ ಅವನ ಕತೆಯನ್ನು ಮುಗಿಸು" ಎಂದು ತಿಳಿಸಿದನು.

ಎಂದಿನಂತೆ ಮಾರನೇ ದಿನವೂ ಬುದ್ಧನು ಅದೇ ದಾರಿಯಲ್ಲಿ ಭಿಕ್ಷೆ ಬೇಡುತ್ತಾ ನಡೆಯುತ್ತಿದ್ದನು. ಆನೆಯ ಮಾವುತನು ನಳಗಿರಿಯನ್ನು ಅಂಕುಶವಿಲ್ಲದೆ ರಸ್ತೆಯಲ್ಲಿ ದೌಡಾಯಿಸಿದ. ಮತ್ತೇರಿ, ಸೊಂಡಿಲೆತ್ತಿ ಬರುತ್ತಿದ್ದ ಆನೆ ಕೋಪದಿಂದ ಬುದ್ಧನ ಕಡೆ ನುಗ್ಗಿತು.

ಆದರೆ ಆಶ್ಚರ್ಯವೆಂದರೆ ಬುದ್ಧನನ್ನು ನೋಡಿದ ತಕ್ಷಣ ನಳಗಿರಿಯ ಕೋಪ ಶಾಂತವಾಯಿತು. ಪ್ರೇಮ ತುಂಬಿದ ದೃಷ್ಟಿಯಿಂದ ಬುದ್ಧನು ಆನೆಯನ್ನು ನೋಡುತ್ತಲೇ ಅದು ಆಜ್ಞಾಪಾಲಕ ಬಾಲಕನಂತೆ ಸೊಂಡಿಲನ್ನು ಕೆಳಗೆ ಮಾಡಿಕೊಂಡು ಬುದ್ಧನ ಪಾದವನ್ನು ನೋಡುತ್ತಾ ನಿಂತಿತು. ಬುದ್ಧನು ಪ್ರೀತಿಯಿಂದ ಅದರ ಮೈದಡವಿ ಆಶೀರ್ವದಿಸಿದನು.

ನಳಗಿರಿಯು ಬುದ್ಧನ ಪಾದದ ಬಳಿಯ ಧೂಳನ್ನು ಸೊಂಡಿಲಿನಿಂದ ಹೀರಿ ಅನೇಕ ಸಲ ತನ್ನ ಮೇಲೆ ಹಾಕಿಕೊಂಡಿತು. ನಂತರ ಸದ್ದಿಲ್ಲದೆ ಹೊರಟು ಹೋಯಿತು.

ಈ ಘಟನೆಯ ಸ್ವಲ್ಪ ದಿನಗಳ ನಂತರ ದೇವದತ್ತನು ರೋಗದಿಂದ ಮಲಗಿದನು. ಈಗ ಅವನು ತನ್ನ ದುಷ್ಕಾರ್ಯಗಳಿಗಾಗಿ ಪಶ್ಚಾತ್ತಾಪ ಪಟ್ಟನು. ಬುದ್ಧನ ಬಳಿ ಹೋಗಿ ಅವನ ಕ್ಷಮೆ ಬೇಡಿ ಅವನ ಆಶೀರ್ವಾದ ಪಡೆಯಬೇಕೆಂಬುದು ಅವನ

ಅಂತಿಮ ಇಚ್ಛೆಯಾಯಿತು. ಕೆಲವು ಭಿಕ್ಷುಗಳು ಅವನಿಗೆ ನೆರವಾಗಿ ಅವನನ್ನು ಬುದ್ಧನ ಬಳಿಗೆ ಕರೆತರುವ ಪ್ರಯತ್ನ ಮಾಡಿದರು. ಆದರೆ ಅವನು ದಾರಿಯಲ್ಲೇ ಕೊನೆಯ ಉಸಿರನ್ನು ಎಳೆದನು. ಸಾಯುವಾಗ ಅವನು ಬುದ್ಧನ ನಾಮಸ್ಮರಣೆ ಮಾಡುತ್ತಿದ್ದನು.



# ಮಹಾಪರಿನಿರ್ವಾಣ

ಗೌತಮ ಬುದ್ಧನಿಗೆ ಈಗ ವಯಸ್ಸಾಗಿತ್ತು ಅವನಿಗೆ ಮತ್ತೊಬ್ಬರ ಸಹಾಯದ ಅ ಶ್ಯಕತೆಯ ಅರಿವು ಆಯಿತು. ಭಿಕ್ಷುಗಳ "ನಾಮುಂದೆ, ತಾಮುಂದೆ" ಎಂದ ತಮ್ಮ ತಮ್ಮಲ್ಲೇ ಪೈಪೋಟಿಗೆ ನಿಂತರು "ನಿಮ್ಮ ಸೇವೆಯನ್ನು ನಾನು ಮಾಡುತ್ತೇನೆ" ಎಂದು ಶಾರಿಪುತ್ರನು ಹೇಳಿದನು

"ಇಲ್ಲ, ಮಹಾಪ್ರಭುಗಳೇ ಸೇವೆಯನ್ನು ನಾನು ಮಾಡುತ್ತೇನೆ" ಎಂದು ಮೊಗ್ಗಲ್ಲಣ ಹೇಳಿದನು.

ಬುದ್ಧನು ಆಲೋಚಿಸಿದನು. "ಶಾರಿಪುತ್ರನೂ, ಮೊಗ್ಗಲ್ಲಾನೂ ಸಂಘದ ಪ್ರಮುಖ ಸದಸ್ಯರಾದುದರಿಂದ ಆಡಳಿತವನ್ನು ಧಕ್ಷತೆಯಿಂದ ನಿಭಾಯಿಸಲು ಇವರೇ ಸಮರ್ಥರು. ಇತರರಿಗೆ ಅನುಭವ ಸಾಲದು. ಅಲ್ಲದೇ ಇವರೂ ನನ್ನಂತೆಯೇ ವಯಸ್ಸಾದವರು. ಇವರುಗಳನ್ನು ನನ್ನ ಸೇವೆಗೆ ನಿಲ್ಲಿಸಿಕೊಂಡರೆ ಸಂಘಕ್ಕೆ ಬಹಳ ತೊಂದರೆಯಾಗುತ್ತದೆ." ಆಗ ಅವನಿಗೆ ಆನಂದನ ಜ್ಞಾಪಕವಾಯಿತು. ಆನಂದನು ಯುವಕನೂ, ಶಾಂತಸ್ವಭಾವದವನೂ ಆಗಿದ್ದನು. ಆದ್ದರಿಂದ ಆನಂದನನ್ನು ತನ್ನ ಸೇವೆಗೆ ಇಟ್ಟುಕೊಂಡನು.

ಮೊದಲಿನಿಂದ ಬುದ್ಧನ ಪ್ರಿಯ ಶಿಷ್ಯನಾದ ಆನಂದನು -ಇಪ್ಪತ್ತು ವರ್ಷಕ್ಕೂ ಹೆಚ್ಚುಕಾಲ ಗುರುವಿನ ಜೊತೆಯಲ್ಲಿಯೇ ಇದ್ದನು. ದಯಾಮಯನಾದ ಬುದ್ಧನು ಎಂಭತ್ತು ವರ್ಷ ವಯಸ್ಸಾದರೂ ಊರಿಂದ ಊರಿಗೆ ಸಂಚರಿಸುತ್ತಾ ಧರ್ಮವನ್ನು ಬೋಧಿಸುತ್ತಿದ್ದನು.

ಲಿಚ್ಛವಿ ಗಣರಾಜ್ಯದ ರಾಜಧಾನಿಯಾದ ವೈಶಾಲಿ ಪಟ್ಟಣದ ಬಳಿ ಬುದ್ಧನು ತನ್ನ ಅಂತಿಮ ಪ್ರವಾಸವನ್ನು ಕೈಗೊಂಡನು. ಅಂಬಾಪಾಲಿಯೆಂಬ ನರ್ತಕಿ ಒಬ್ಬಳಿಗೆ ಸೇರಿದ ಮಾವಿನ ತೋಪಿನಲ್ಲಿ ವಾಸಕ್ಕೆ ನಿಂತನು. ಶಾಕ್ಯ ಮುನಿಯು ತನ್ನ ತೋಟಕ್ಕೆ ಬಂದಿರುವುದನ್ನು ತಿಳಿದು ಅವನಿಗೆ ನಮಸ್ಕರಿಸಲು ಅಂಬಾಪಾಲಿ ಅಲ್ಲಿಗೆ ಬಂದಳು. ತನ್ನ ಮನೆಗೆ ಬುದ್ಧ ದೇವನು ತನ್ನ ಪರಿವಾರದೊಡನೆ ಬಂದು ಔತಣದ ಭಿಕ್ಷೆಯನ್ನು ಸ್ವೀಕರಿಸಬೇಕೆಂದು ಆಹ್ವಾನಿಸಿದಳು.

ಲಿಚ್ಛವೀ ಸಾಮ್ರಾಜ್ಯದ ಪ್ರಮುಖರು ಕೆಲವರು ಅಲ್ಲಿಗೆ ಬಂದು ಬುದ್ಧನನ್ನು ತನ್ನ ಪರಿವಾರದೊಡನೆ ಅದೇ ದಿನ ಭೋಜನಕ್ಕೆ ಬರಬೇಕೆಂದು ವಿನಂತಿಸಿಕೊಂಡರು.

"ಆದರೆ ಅಂಬಾಪಾಲಿಯ ಆಮಂತ್ರಣವನ್ನು ಈಗಾಗಲೇ ಸ್ವೀಕರಿಸಿದ್ದೇನೆ. ಆದ್ದರಿಂದ ನಾನು ನಿಮ್ಮ ಆಮಂತ್ರಣವನ್ನು ಸ್ವೀಕರಿಸಲಾರೆ" ಎಂದು ಬುದ್ಧನು ನಮ್ರತೆಯಿಂದ ಹೇಳಿದನು.

"ನೀವು ನಮ್ಮಂಥ ಪ್ರಮುಖರಿಗಿಂತ ಒಬ್ಬ ಸಾಮಾನ್ಯ ನರ್ತಕಿಗೆ ಹೆಚ್ಚು ಮಹತ್ವ ನೀಡುತ್ತಿದ್ದೀರಿ" ಎಂದು ಅವರುಗಳು ಆಕ್ಷೇಪಿಸಿದರು.

ಆದರೆ ಗೌತಮ ಬುದ್ಧನ ದೃಷ್ಟಿಯಲ್ಲಿ ಯಾರೂ ಹೆಚ್ಚಲ್ಲ, ಯಾರೂ ಕಡಿಮೆಯಲ್ಲ. ದೊಡ್ಡವರು ಸಣ್ಣವರು ಎಂಬ ವಿಷಯ ಅವನಿಗೆ ಎಂದೂ ಬರಲಿಲ್ಲ. ಬಹುಶಃ ಬಡ ನರ್ತಕಿಗೆ ಗೌತಮ ಬುದ್ಧನ ಆಶೀರ್ವಾದದ ಅವಶ್ಯಕತೆ



ಹೆಚ್ಚಾಗಿತ್ತು. ಗೌತಮ ಬುದ್ಧನು ಲಿಚ್ಛವಿ ಪ್ರಮುಖರ ಆಮಂತ್ರಣವನ್ನು ನಿರಾಕರಿಸಿದನು.

ಭೋಜನವಾದ ಮೇಲೆ ಬುದ್ಧನು ಮಾವಿನ ತೋಪಿಗೆ ಹಿಂತಿರುಗಿದನು. ಅಲ್ಲಿ ದೇಹಾರೋಗ್ಯ ಕೆಟ್ಟು ಮಲಗಿದನು. ಬುದ್ಧನಿಗೆ ಮರಣ ಸಮೀಪಿಸಿದೆ ಎಂದು ಆನಂದನಿಗೆ ಅರಿವಾಯಿತು. ಅವನು ಮಗುವಿನಂತೆ ಅಳುತ್ತಾ "ಮಹಾಪ್ರಭೋ, ನಮ್ಮನ್ನೆಲ್ಲಾ ಅಗಲಿ ಹೋಗಬೇಡಿ. ನೀವು ಅಗೆಲಿದರೆ ನಮಗೆ ಮಾರ್ಗದರ್ಶಕರು ಯಾರು?" ಎಂದು ಗೋಳಾಡಿದನು.

"ಏಕೆ ಅಳುತ್ತೀಯಾ ಆನಂದ? ನನ್ನ ನಂತರ ನನ್ನ ನೀತಿ ಬೋಧೆ ಮತ್ತು ಸಂಘ ನಿನಗೆ ದಾರಿ ತೋರುತ್ತವೆ, ಚಿಂತಿಸಬೇಡ" ಎಂದು ಬುದ್ಧನು ಆನಂದನನ್ನು ಸಮಾಧಾನಪಡಿಸಿದನು.

ದೈವವಷಾತ್ ಬುದ್ಧನು ಶೀಘ್ರವಾಗಿ ಗುಣ ಹೊಂದಿದನು. ಆದರೆ ಅಂತಿಮ ಸಮಯ ಹತ್ತಿರ ಬರುತ್ತಿದೆ ಎಂದು ಬುದ್ಧನು ಅರಿತನು. ಆದಕಾರಣ ಅವನ ಚಟುವಟಿಕೆಗಳು ಹೆಚ್ಚಾದುವು. ಸಂಘದ ಬಗ್ಗೆ, ಭಿಕ್ಕುಗಳ ಬಗ್ಗೆ ಅವನ ಚಿಂತನೆ ಹೆಚ್ಚಾಯಿತು. ವೈಶಾಲಿಯ ಎಲ್ಲಾ ಭಿಕ್ಕುಗಳನ್ನೂ ಒಟ್ಟುಗೂಡಿಸಿ ಅವರಿಗೆ ತನ್ನ ಜೀವನದ ಅಂತಿಮ ಪ್ರವಚನ ನೀಡಿದನು.

"ಪ್ರತಿ ವ್ಯಕ್ತಿಯೂ ತನ್ನ ಉದ್ಧಾರಕ್ಕಾಗಿ ತನ್ನಲ್ಲಿರುವ ಶಕ್ತಿಯನ್ನೇ ಆಶ್ರಯಿಸಬೇಕು. ಪ್ರತಿಯೊಬ್ಬನೂ ಆತ್ಮ ಸಂಯಮವನ್ನು ಸಾಧಿಸಬೇಕು. ಆತ್ಮ ಸಂಯಮದಿಂದ ಮಾತ್ರ ಶೀಲವಂತನಾಗಿ ಬಾಳಬಹುದು ಮತ್ತು ಸತ್ಯವನ್ನು ಸಾಧಿಸಬಹುದು" ಎಂದು ಬೋಧಿಸಿದನು.

ವೈಶಾಲಿಯನ್ನು ಬಿಟ್ಟ ಬುದ್ಧನು ಮಲ್ಲರ ದೇಶವಾದ ಕುಶೀನಗರಕ್ಕೆ ಬಂದನು. ಅಲ್ಲಿ ಚುಂಡನೆಂಬ ಕಮ್ಮಾರನ ಆತಿಥ್ಯವನ್ನು ಸ್ವೀಕರಿಸಿದನು. ಬುದ್ಧನ ಕುಂದಿದ ದೇಹಕ್ಕೆ ಚುಂಡನು ಬಡಿಸಿದ ರಸಭರಿತ ಭೋಜನ ಬಹುಶಃ ತೊಂದರೆ ಮಾಡೀತೆಂದು ತಿಳಿದರೂ ಬುದ್ಧನು ಅವನ ಮನ ನೋಯಿಸಬಾರದೆಂದು ಕಷ್ಟ ಪಟ್ಟು ತಿಂದನು. ಅದರಿಂದಾಗಿ ಬುದ್ಧನು ಪುನಃ ಆರೋಗ್ಯ ಕೆಟ್ಟು ಮಲಗಿದನು.

ಮಾರನೇ ದಿನ ನದಿಯಲ್ಲಿ ಸ್ನಾನ ಮಾಡಿದನು. ಮರದ ನೆರಳಿನಲ್ಲಿ ಒಗೆದ ಬಟ್ಟೆಯನ್ನು ಹಾಸುವಂತೆ ಆನಂದನಿಗೆ ಹೇಳಿ, ಅಲ್ಲೇ ಸ್ವಲ್ಪ ಕಾಲ ವಿಶ್ರಾಂತಿ ಪಡೆದನು. ನಂತರ ಅಲ್ಲಿ ಬಂದಿದ್ದ ಮಲ್ಲರ ರಾಜ ಪರಿವಾರದವರೆಲ್ಲರನ್ನೂ ಭೇಟಿ ಮಾಡಿದನು. ಅವರು ಹಿಂತಿರುಗಿದ ಮೇಲೆ ಮತ್ತೆ ಸ್ವಲ್ಪ ಕಾಲ ವಿಶ್ರಾಂತಿ ಪಡೆದನು.

ಇಷ್ಟರಲ್ಲಿ ಸುಬದ್ಧನೆಂಬ ಸಂನ್ಯಾಸಿ ಬಂದು ಬುದ್ಧನನ್ನು ನೋಡಬಯಸಿದನು.

"ಗುರುಗಳಿಗೆ ತುಂಬಾ ಆಯಾಸವಾಗಿದೆ. ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾರೆ" ಎಂದು ಆನಂದನು ಹೇಳಿದನು.

ಈ ಮಾತುಗಳನ್ನು ಕೇಳಿಸಿಕೊಂಡ ಬುದ್ಧನು ಸಂನ್ಯಾಸಿಯನ್ನು ಕಳಿಸಲು ಆನಂದನಿಗೆ ಹೇಳಿದನು. ಮರಣ ಅಷ್ಟು ಸಮೀಪವಾಗಿದ್ದಾಗಲೂ ಆಶ್ರಯ ಕೋರಿ

ಬಂದವರಿಗೆ ಇಲ್ಲವೆನ್ನಲಿಲ್ಲ. ಸುಬದ್ಧನು ಗೌತಮನ ಉಪದೇಶ ಪಡೆದು ಸಂತೋಷದಿಂದ ಸಂಘವನ್ನು ಸೇರಿದನು. ಬುದ್ಧನಿಂದ ನೇರವಾಗಿ ಸಂಘಕ್ಕೆ ಸೇರಿಸಲ್ಪಟ್ಟ ಭಿಕ್ಕುಗಳ ಪೈಕಿ ಸುಬದ್ಧನೇ ಕೊನೆಯವನು.

ಬುದ್ಧನ ದೇಹ ಪ್ರಕೃತಿ ಇನ್ನೂ ಕ್ಷೀಣಿಸಿತು. ಅಕ್ಕಪಕ್ಕದಲ್ಲಿದ್ದ ಅನೇಕ ಭಿಕ್ಕುಗಳೂ ಇತರ ಅನುಯಾಯಿಗಳೂ ಬಂದು ಆತನ ಸುತ್ತಲೂ ನೆರೆದರು. ಅವರೆಲ್ಲರಿಗೂ ಅಂತಿಮವಾಗಿ "ಮರಣವು ಅನಿವಾರ್ಯ ಮತ್ತು ಸಹಜ. ಆದ್ದರಿಂದಲೇ ಬದುಕಿರುವವರೆಗೂ ಸನ್ಮಾರ್ಗದಲ್ಲಿ ಬಾಳಲು ಕಲಿಯಿರಿ" ಎಂದು ಉಪದೇಶಿಸಿದನು. ಈ ರೀತಿ ನುಡಿದ ಬುದ್ಧ ಗುರು ದೇಹವನ್ನು ತ್ಯಜಿಸಿ ಮಹಾಪರಿನಿರ್ವಾಣವನ್ನು ಹೊಂದಿದನು.

ಆದರೆ ಬುದ್ಧನ ಉಪದೇಶಗಳು ಅವನೊಡನೆ ಸಾಯಲಿಲ್ಲ. ಅವನು ಜೀವಂತವಾಗಿರುವಾಗಲೇ ಬೌದ್ಧ ಧರ್ಮ ಭಾರತದಲ್ಲೆಲ್ಲಾ ವ್ಯಾಪಿಸಿತ್ತು. ಅವನ ಕಾಲಾನಂತರ ಈ ಧರ್ಮ ಭಾರತದ ಹೊರಗಡೆಯೂ ಹಬ್ಬಿತು. ಅಶೋಕ ಚಕ್ರವರ್ತಿಯು ಈ ಧರ್ಮ ಪ್ರಚಾರ ಕಾರ್ಯವನ್ನು ಹೆಚ್ಚು ದಕ್ಷತೆಯಿಂದ ಕೈಗೊಂಡನು. ಬರ್ಮಾ, ಇಂಡೋಚೀನಾ, ಶ್ರೀಲಂಕಾ, ಟಿಬೆಟ್, ಚೀಣಾ ಮತ್ತು ಜಪಾನ್ ದೇಶಗಳಿಗೆ ಹಬ್ಬಿ ದಿಗದಿಗಂತಗಳಲ್ಲಿ ಬೌದ್ಧ ಧರ್ಮದ ಪ್ರಚಾರವಾಯಿತು.

"ಬುದ್ಧಂ ಶರಣಂ ಗಚ್ಛಾಮಿ
ಧರ್ಮಂ ಶರಣಂ ಗಚ್ಛಾಮಿ
ಸಂಘಂ ಶರಣಂ ಗಚ್ಛಾಮಿ"

(ಬುದ್ಧನಲ್ಲಿ ಶರಣು ಹೋಗುತ್ತೇನೆ, ಧರ್ಮದಲ್ಲಿ ಶರಣು ಹೋಗುತ್ತೇನೆ, ಸಂಘದಲ್ಲಿ ಶರಣು ಹೋಗುತ್ತೇನೆ.)

Printed at Jupiter Offset Works, Shahdara, Delhi-110032

